

# ಸಪ್ತಗಿರಿ

ಜುಲೈ 1986

ಬೆಲೆ: ರೂ ೧



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ತನು ನಿನ್ನದು ಜೀವನ ನಿನ್ನದೋ
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ॥ ಪ ॥

ಸವಿನುಡಿ ವೇದ ಪುರಾಣಶಾಸ್ತ್ರಂಗಳ
ಕಿವಿಯಿಂದ ಕೇಳೊ ಕಥೆ ನಿನ್ನದೊ
ನವ ಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ

ಎಡೆಗೂಡಿ ಗಂಧ ಕಸ್ತೂರಿ ಪರಿಮಳಗಳ
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ

ಮಾಯಾಪಾಶದ ಬಲೆಯೊಳಗೆ ಸಿಲ್ಕಿದ
ಕಾಯ ಪಂಚೇಂದ್ರಿಯಗಳು ನಿನ್ನವೊ
ಕಾಯಜ ಜನಕ ಒಡೆಯ ಆದಿಕೇಶವ
ರಾಯ ನೀನಲ್ಲದೆ ನಾರು ಸ್ವತಂತ್ರರೇ

—ಕನಕದಾಸರು.

## ತಿರುಮಲೆ ತಿರುಪತಿ ದೇವಸ್ಥಾನಗಳು.

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ; ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 10 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ. ತಿ. ದೇವಸ್ಥಾನಗಳ್ ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ.

* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.

* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.

* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.

* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.

* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಶಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್, ಬೊಂಬಾಯಿ) | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂ.ಪ್ರ.**

**ಕಾರ್ಯನಿರ್ವಹಣಾಧಿಕಾರಿ**



ಸಂಪುಟ ೧೭] ಜುಲೈ ೧೯೮೬ [ಸಂಚಿಕೆ ೨

# ವಿಷಯಸೂಚಿ



ಮುಖಚಿತ್ರ : ಪೆರಿಯಾಳ್ವಾರ್

ಹಿಂಬದಿಯಲ್ಲಿ : ಆಳವಂದಾರ್ (ಯಾಮುನಾಚಾರ್ಯ)

ಒಳಗಡೆ : (1) ಸಾಕ್ಷಾತ್ಕಾರ ವೈಭವಂ, ಶ್ರೀನಿವಾಸ ಮಂಗಾಪುರ.

(2) ಮಂಗಾಪುರದ ತೆಪ್ಪೋತ್ಸವದಲ್ಲಿ ಶ್ರೀ ಪದ್ಮಾವತೀ ಅಮ್ಮನವರು.


ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. –ಸಂ॥




ಗುರುವಿನ ಗರಿಮೆಯ ಬಗ್ಗೆ ಭಾರತೀಯರಿಗೆ ಹೊಸದಾಗಿ ಹೇಳಬೇಕಾದ್ದೇನಿಲ್ಲ. ಗುರುವನ್ನೂ ತಂದೆಯಂತೆಯೇ ಪೂಜಿಸಿ, ಗೌರವಿಸಿ ನಡೆದದ್ದು ಸನಾತನಧರ್ಮ. ಕಾವ್ಯ ಏನೆಲ್ಲ ಆದರೂ ಮಾನವನ ವಿಕಾಸಕ್ಕೆ ತಂದೆಯಂತೆಯೇ ಪ್ರೇಮ, ಅಧಿಕಾರ, ನಯ ಇತ್ಯಾದಿ ತನ್ನಲ್ಲಿನ ಎಲ್ಲ ಶಕ್ತಿಗಳಿಂದಲೂ ಪ್ರಯತ್ನಿಸುವುದರಿಂದ ಕವಿಗಳನ್ನೂ ಅದೇ ಸಾಲಿಗೆ ಸೇರಿಸಬಹುದು. ಇಂತಲ್ಲಿ ಭಾರತವನ್ನು ಬರೆದು ಭಾರತೀಯರಿಗೆ ಧರ್ಮದ ವಿವರಗಳನ್ನು, ಉದ್ಧಾರದ ಎಳೆಗಳನ್ನು ನೀಡಿದ ದ್ವೈಪಾಯನರನ್ನು ಗುರುವೆಂದು ಗಣಿಸಿ ಆರಾಧಿಸುವುದೂ ಅಸಂಗತವೇನಲ್ಲ.

ವ್ಯಾಸರಿಂದ ಹಿಡಿದು ಆರಂಭವಾದ ಆಚಾರ್ಯಪರಂಪರೆ ನಿರಂತರವಾಗಿ ಬೆಳೆದು ಬಂದಿದೆ ಇಲ್ಲಿಯವರೆಗೆ. ಆಳ್ವಾರರು, ನಾಥಮುನಿ, ಆಳವಂದಾರ್, ರಾಮಾನುಜರು, ಹಾಗೆಯೇ ಶಂಕರಾಚಾರ್ಯ, ಮಧ್ವಾಚಾರ್ಯ, ವಲ್ಲಭಾಚಾರ್ಯ, ಚೈತನ್ಯ, ರಾಮಾನಂದ, ದಯಾನಂದ, ಪರಮಹಂಸ, ವಿವೇಕಾನಂದ ಹೀಗೆ ಮುಂದುವರಿದಿದೆ. ಪ್ರತಿಯೊಂದು ಸಂದಿಗ್ಧಾವಸ್ಥೆಯಲ್ಲೂ ಭಾರತೀಯರನ್ನು ಬೆಳಕಿನತ್ತ ಕರೆದೊಯ್ದಿದೆ. ಮುಸುಕಿದ ಮಬ್ಬಿನಲ್ಲಿ ಕೈಹಿಡಿದು ನಡೆಸುವ ಆ ಗುರುಪರಂಪರೆಯನ್ನು, ಅವರ ಕೃತಿಪರಂಪರೆಯನ್ನು ಗೌರವಿಸಿ ಆದರಿಸಿ ಅನುಸರಿಸುವುದರ ಸಂಕೇತವೇ ಗುರುಪೂರ್ಣಿಮೆಯ ಗುರುಪೂಜಾಕಾರ್ಯಕ್ರಮ.

ಭಾರತೀಯರು–ಸನಾತನ ಧರ್ಮ–ಶಾಂತಿಯ ಸಹಬಾಳ್ವೆಯ ವಿಶ್ವಕುಟುಂಬ ಭಾವನೆಯ ಆಗರವೇ ಆದರೂ, 21 ನೇ ಶತಮಾನದತ್ತ ದಾಪುಗಾಲು ಹಾಕುತ್ತಿರುವ ಈ ಹೊತ್ತಿನಲ್ಲಿ, ವಿಶ್ವದೆಲ್ಲೆಡೆಯಂತೆಯೇ ಇಲ್ಲಿಯೂ ಅಶಾಂತಿ, ಅಸೌಜನ್ಯಗಳ ಅಸಮಭಾವಗಳು ತಲೆ ಹಾಕಿ ಪ್ರಗತಿಯ ಹಾದಿಯಲ್ಲಿ ಮುಳ್ಳಾಗಿವೆ, ಪಾರಮಾರ್ಥಕ್ಕೆ ಪ್ರತಿರೋಧಕಗಳಾಗಿವೆ. ಅನುಕ್ಷಣವೂ ಕೆಸರಲ್ಲಿ ಕಾಲಿಳಿಯುವಂತೆ, ಇಹದ ಬಂಧನ ಹೆಚ್ಚುತ್ತಿದೆ. ಇಂತಲ್ಲಿ ಬಿಡಿಸಿಕೊಳ್ಳುವುದಕ್ಕೆ ಮಾರ್ಗ ಗುರುವೊಬ್ಬನೆ. ಗುರುವಿನ ಗುಲಾಮನಾಗದನಕ ದೊರೆಯದಣ್ಣ ಮುಕುತಿ.

ಗುರು ಎಂಬುದ ನಮ್ಮಂತೆಯೇ ಅಸ್ಥಿ ಮಜ್ಜೆ ಮಾಂಸಗಳಿಂದ ಸ್ವಾರ್ಥ, ಸಿಟ್ಟು ಸೆಡವುಗಳಿಂದ ಕೂಡಿದ ಇನ್ನೊಬ್ಬ ವ್ಯಕ್ತಿ ಅಲ್ಲ. ಅದೊಂದು ತತ್ತ್ವ ಎಂದು ತಿಳಿಯಬೇಕು. ಒಳಿತಿನಕಡೆಯ ಪಯಣದಲ್ಲಿ ಬೆಳಕಿನ ಹಾದಿ ತೋರುವವನು ಗುರು–ಹೆಜ್ಜೆ ಇಡುವವನು ಶಿಷ್ಯನೇ ಹೊರತು ಗುರುವಲ್ಲ–ಕಾರಣವಾದದ್ದು ಎಲ್ಲವೂ ಗುರುವೇ. ಅದು ನಮ್ಮಲ್ಲಿನ ಸದಸದ್ವಿವೇಕಕ್ಕೆ ಚಾಲಕನಾಗಿ ದೊರೆತ ಪೂರ್ವಸೂರಿಗಳ ಪುಸ್ತಕವಾಗಬಹುದು, ಭಕ್ತಿ ಮಾರ್ಗದ ಸಂತ ಶಿರೋಮಣಿಗಳ ಸೂಕ್ತಿಯಾಗಿರಬಹುದು ಅಥವಾ ಇಲ್ಲಿಯೇ ಇರುವ ಪರಿಸರದ ಹಿರಿಯರ ಮೌನವೂ ಆಗಿರಬಹುದು. ಒಟ್ಟಿನಲ್ಲಿ ಗಮ್ಯ ಮುಖ್ಯವಾದಷ್ಟೇ ಗಮನದ ರೀತಿಯೂ ಮುಖ್ಯವೆನ್ನುವ ಅರಿವನ್ನುಂಟುಮಾಡುವ ಎಲ್ಲವೂ ಗುರುವೇ.

ಇಂತಹ ಗುರುವಿನ ಗುಲಾಮನಾಗುವುದು ದಾಸರ ಅಪೇಕ್ಷೆಯಾಗಿದ್ದಿತು. ಅದು ನಮ್ಮ ಅಪೇಕ್ಷೆಯೂ ಆದಲ್ಲಿ ಬಾಳುಸುಗಮವಾಗಿ ಸಾಮಾಜಿಕ, ಆರ್ಥಿಕ, ಆಧ್ಯಾತ್ಮಿಕ ಶಾಂತಿ ಸೌಹಾರ್ದಗಳನ್ನು ಮರಳಿ ಪಡೆಯಬಹುದೆಂಬುದರಲ್ಲಿ ಸಂದೇಹವಿಲ್ಲ.

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ

ಓಂ ಶಾಂತಿ ಶಾಂತಿ ಶಾಂತಿಃ

# ಕರ್ಮರಹಸ್ಯ

ಲಕ್ಷ್ಮೀತನಯ

"ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್" ಎಂದರೆ ಯಾವನೊಬ್ಬನೂ ಯಾವ ಕೆಲಸವನ್ನೂ ಮಾಡದೆ ಒಂದು ಕ್ಷಣವೂ ಸುಮ್ಮನಿರಲಾರ ಎಂದು ಶ್ರೀಕೃಷ್ಣನು ಹೇಳಿದ್ದಾನೆ. ದೈಹಿಕವಾಗಿ ಸುಮ್ಮನಿದ್ದರೂ ಮಾನಸಿಕವಾಗಿ ಏನನ್ನಾದರೂ ಯೋಚಿಸುತ್ತ ಇರುತ್ತೇವೆ. ......ತಪಸ್ಸು ಮಾಡಲಿಲ್ಲ ನಾವೇ ತಾಪ ಹೊಂದಿದೆವು, ನಮ್ಮ ಆಸೆ ಮುಪ್ಪಾಗಲಿಲ್ಲ, ನಮಗೇ ಮುಪ್ಪಡರಿತು......" ಎಂಬ ಭರ್ತೃಹರಿಯ ಮಾತಿನಂತೆ ಇಷ್ಟೆಲ್ಲಾ ನಾವು ದಿನವಿಡೀ ಶ್ರಮಜೀವಿಗಳಾದರೂ ಸಾರ್ಥಕ ಜೀವನ ನಮ್ಮದಾಗಲಿಲ್ಲವಲ್ಲ? ಇದಕ್ಕೇನು ಕಾರಣ? "ನಾವು ಸಂಸಾರದಲ್ಲಿಯೇ ಉಳಿದೆವು, ಸಂಸಾರ ಬಿಟ್ಟು ತಪಸ್ಸು ಮಾಡಲು ಕಾಡಿಗೆ ಹೋಗಬೇಕಾಗಿತ್ತು" ಎಂಬ ವಿಚಾರ ಕೆಲವರಲ್ಲಿ ಸುಳಿಯಬಹುದು. ಆದರೆ ಇದು ಸರಿಯಲ್ಲ ಎನ್ನುತ್ತದೆ ವ್ಯಾಸರ ಈ ವಾಣಿ–"ದಾಂತಸ್ಯ ಕಿಮರಣ್ಯೇನ ತಥಾ ದಾಂತಸ್ಯ ಭಾರತ। ಯತ್ರೈವ ನಿವಸೇದ್ದಾಂತಃ ತದರಣ್ಯಂ ಸ ಚಾಶ್ರಮಃ ||" ಅಂದರೆ ಇಂದ್ರಿಯ ನಿಗ್ರಹ ಇದ್ದವನಿಗೆ ಅರಣ್ಯಕ್ಕೆ ಹೋಗುವ ಅವಶ್ಯಕತೆ ಇಲ್ಲ. ಇಂದ್ರಿಯ ನಿಗ್ರಹ ಇಲ್ಲದೆ ಇದ್ದವನಿಗೂ ಅರಣ್ಯಕ್ಕೆ ಹೋಗುವ ಅವಶ್ಯಕತೆ ಇಲ್ಲ. ಇಂದ್ರಿಯ ನಿಗ್ರಹ ಪಡೆದು ನೆಲೆಸುವ ನೆಲೆಯೇ ಅರಣ್ಯ. ಅದುವೇ ಆಶ್ರಮ. ಇಂದ್ರಿಯ ನಿಗ್ರಹರಹಿತನಾಗಿ, ಕರ್ತವ್ಯಚ್ಯುತನಾಗಿ ಸಂಸಾರ ಬಿಟ್ಟು ಕಾಡಿಗೆ ಹೋದರೂ ಲಂಗೋಟಿ ಕಾರಣದಿಂದ ಸನ್ಯಾಸಿ ಪುನಃ ಮದುವೆಯಾದಂತೆ ವ್ಯರ್ಥವೇ ಸರಿ.

ಈಸಬೇಕು ಇದ್ದು ಜಯಿಸಬೇಕು।
ಹೇಸಿಗೆ ಸಂಸಾರದಲ್ಲಿ ಆಸೆ ಲೇಶ
ಇಡದ್ಹಾಗೆ||
ತಾಮರಸ ಜಲದಂತೆ ಪ್ರೇಮವಿಟ್ಟು
ಭವದೊಳು।
ಗೇರುಹಣ್ಣಿನಲ್ಲಿ ಬೀಜ। ಸೇರಿದಂತೆ
ಸಂಸಾರದಿ।
ಮೀರಿಯಾಶೆ ಮಾಡದೆಲೆ। ಧೀರ
ಕೃಷ್ಣನ ಭಕ್ತರೆಲ್ಲ||

ಎಂದು ಸಾರಿದರು ದಾಸವರೇಣ್ಯ ಪುರಂದರದಾಸರು.

"ಪ್ರಪಂಚ ಕರಾವಾ ನಿಟಕಾ"–ಸಂಸಾರವನ್ನು ಚೆನ್ನಾಗಿ ನಡೆಸು. ಆದರೆ ಮೋಹ ಬೇಡ–ಎಂದು ಎಚ್ಚರಿಸಿದರು ಸಂತ ರಾಮದಾಸರು.

ಗೃಹೇಷ್ವೇವ ಸ್ಥಿತೋ ರಾಜನ್
ಕ್ರಿಯಾಃ ಕುರ್ವನ್ ಗೃಹೋಚಿತಾಃ।
ವಾಸುದೇವಾರ್ಪಣಂ ಸಾಕ್ಷಾತ್
ಉಪಾಸೀತ ಮಹಾಮುನೀನ್ ॥

ಮನೆಯಲ್ಲಿ (ಸಂಸಾರದಲ್ಲಿ) ಇದ್ದುಕೊಂಡೇ ತನ್ನ ಕರ್ತವ್ಯಗಳನ್ನು ಶ್ರದ್ಧೆಯಿಂದ ಮಾಡಿ ಅವನ್ನು ದೇವರಿಗೆ ಅರ್ಪಿಸುವುದೇ ಸರಿಯಾದ ಮಾರ್ಗ ಎನ್ನುತ್ತದೆ ಶ್ರೀಮದ್ಭಾಗವತ.

ಭಗವದ್ಗೀತೆಯೂ ಸಹ "ಪದ್ಮಪತ್ರಮಿವಾಂಭಸಾ" ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು ಎಂದು ಸಂದೇಶ ನೀಡಿದೆ. ಆದರೆ 'ಈಸಬೇಕು ಇದ್ದು ಜಯಿಸಬೇಕು' ಇದು ಹೇಗೆ? ಇದೇ ಕರ್ಮಯೋಗದ ಚಮತ್ಕಾರ. ಈಜುವ ಕಲೆ ಬಲ್ಲವರು ಎಷ್ಟೇ ಆಳವಾದ ಜಲಾಶಯದಲ್ಲಿದ್ದರೂ ಮುಳುಗುವುದಿಲ್ಲ. ಆ ಕಲೆಯನ್ನರಿಯದವರು ಮುಳುಗುವರು.

'ಕುರು ಕರ್ಮೈವ ತಸ್ಮಾತ್ತ್ವಂ' ನೀನು ಕರ್ಮವನ್ನು ಮಾಡು ಎಂಬ ಕೃಷ್ಣನ ಮಾತಿಗೆ ಅರ್ಜುನ ನಮ್ಮೆಲ್ಲರ ಪರವಾಗಿ ಈ ಪ್ರಶ್ನೆಯನ್ನು ಮುಂದಿಟ್ಟಿದ್ದಾನೆ. ಒಂದು ಕರ್ಮ ಆಚರಿಸಿ ಮುಗಿಯುವಷ್ಟರಲ್ಲಿ ನಮಗೆ ತಿಳಿದೋ ತಿಳಿಯದೆಯೋ ಆ ಕರ್ಮಾಚರಣೆ ವೇಳೆಯಲ್ಲಿ ಕೆಲವು ಪಾಪಸಂಗ್ರಹವಾಗುತ್ತದೆ. ಅದು ಮತ್ತೊಂದು ಕರ್ಮಕ್ಕೆ ಕಾರಣವಾಗುತ್ತದೆ. ಆ ಕರ್ಮ ಆಚರಿಸಿದಾಗಿಯುವುದರೊಳಗಾಗಿ ಇನ್ನೊಂದು, ಅದರಿಂದ ಮತ್ತೊಂದು, ಅದರಿಂದ ಮಗದೊಂದು...ಹೀಗೆ ಈ ಕರ್ಮದ ಗಂಟು ಬೆಳೆಯುತ್ತಲೇ ಹೋಗುವುದರಿಂದ ಇದಕ್ಕೆ ಕೊನೆ ಎಲ್ಲಿ? ಇದಕ್ಕೆ ಉತ್ತರರೂಪವಾಗಿ 'ನಿಷ್ಕಾಮಕರ್ಮ'ದ ಭಾಗವತಧರ್ಮದ ದಿವ್ಯ ಸಂದೇಶವನ್ನೇ ಭಗವಂತನು ನೀಡುತ್ತಾನೆ. ಊಟ ಮಾಡಿದರೆ ರೋಗ ಬಂದೀತೆಂದು ಊಟವನ್ನೇ ಬಿಟ್ಟರೆ ಹೇಗೆ? ಎಂಬಂತಿದೆ ಅರ್ಜುನನ ಈ ಪ್ರಶ್ನೆ. ಊಟವನ್ನು ಬಿಟ್ಟರೆ ಜೀವನಯಾತ್ರೆಯೇ ನಿಂತು ಹೋಗಿ ಯಾವುದೇ ಧರ್ಮಾಚರಣೆ, ಸಾಧನೆ ಸಾಧ್ಯವಾಗದು. ನಮ್ಮ ದೇಹಕ್ಕೆ ಒಗ್ಗುವ ಹಾಗೂ ಒಳ್ಳೆಯ ಭಕ್ಷ್ಯ, ಭೋಜ್ಯಗಳನ್ನು ವಿಮರ್ಶಿಸಿ ಸ್ವೀಕರಿಸಿದಾಗ ಶರೀರಪುಷ್ಟಿಯು ಸಾಧ್ಯವಾಗುವಂತೆ ಸ್ವಾರ್ಥ ಹಾಗೂ ಸಂಕುಚಿತ ದೃಷ್ಟಿಯ ಕರ್ಮಗಳಿಂದ ಸಂಸಾರ ಬೆಳೆದರೆ ಯಜ್ಞಾದಿರೂಪ ಅಂದರೆ ಭಗವದರ್ಪಣ ಬುದ್ಧಿಯಿಂದ ಮಾಡುವ ಕರ್ಮಗಳಿಂದ ಸಂಸಾರ ದುಃಖ ಬಿಡುಗಡೆ ಸಾಧ್ಯ.

ಕರ್ಮವು ಬೀಗದಕ್ಕೆ ಇದ್ದಂತೆ. ಬೀಗದ ಕೈಯಿಂದ ಪೆಟ್ಟಿಗೆಯನ್ನು ಮುಚ್ಚಲು ಬರುವಂತೆ ತೆರೆಯಲೂ ಬರುತ್ತದೆ. ಲಾಭೋದ್ದೇಶದಿಂದ ಹೋಟೆಲ್‌ಗಳಲ್ಲಿ ತಯಾರಿಸುವ ತಿಂಡಿಗಳಲ್ಲಿ ವಂಚನೆ ಸಾಧ್ಯವಿದ್ದರೂ ಮನೆಯಲ್ಲಿ ಮಕ್ಕಳಿಗಾಗಿ ತಾಯಿ ತಯಾರಿಸುವ ತಿಂಡಿಯಲ್ಲಿ ಅದು ಸಾಧ್ಯವಿಲ್ಲ. ಮೊದಲನೆಯದು ಕಾಮ್ಯಕರ್ಮ, ಎರಡನೆಯದು ನಿಷ್ಕಾಮಕರ್ಮ. ಕಾಮ್ಯಕರ್ಮದಿಂದ ಸಂಸಾರಬಂಧನವು ಬಿಗಿಯಾದರೆ ನಿಷ್ಕಾಮಕರ್ಮದಿಂದ ಅದರ ಬಿಡುಗಡೆ ಸಾಧ್ಯವಾಗುತ್ತದೆ.

ಕರ್ಮ ಮಾಡುವವನು ಕರ್ಮದ ಫಲ ನಮಗೇ ಸಿಗುವುದಾದರೆ ಮಾತ್ರ ಕರ್ಮ ಮಾಡುವೆವು ಎನ್ನುತ್ತಾನೆ. ಆದರೆ ಗೀತೆ

"ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ"-ಕರ್ತವ್ಯವನ್ನು ಮಾಡು. ಆದರೆ ಫಲಾಪೇಕ್ಷೆ ಬೇಡ' ಎನ್ನುತ್ತದೆ. ಇದು ಸಾಮಾನ್ಯರ ದೃಷ್ಟಿಯಲ್ಲಿ ಹಾಗೂ ಮೇಲ್ನೋಟಕ್ಕೆ ಅವ್ಯವಹಾರ್ಯ ಎಂದೆನಿಸುವಂತಿದ್ದರೂ ಈ ವಿಚಾರ ಮನಃಶಾಸ್ತ್ರದ ಹಿನ್ನೆಲೆ ಹೊಂದಿರುವುದನ್ನು ಗಮನಿಸಬೇಕು 'ಯೋಗಸ್ಥಃ ಕುರು ಕರ್ಮಾಣಿ'-ಯೋಗದಲ್ಲಿದ್ದು ಕರ್ತವ್ಯಮಾಡು-ಎಂದು ಹೇಳಿದ ಕೃಷ್ಣ. ಇಲ್ಲಿ 'ಯೋಗ' ಎಂದರೇನೆಂಬುದನ್ನು 'ಸಮತ್ವಂ ಯೋಗ ಉಚ್ಯತೇ' ಎಂದು ತಾನೇ ವಿವರಿಸಿದ್ದಾನೆ. ಅಂದರೆ ನಾವು ಪ್ರಾರಂಭಿಸಿದ ಕಾರ್ಯ ಸಿದ್ಧಿಸಿದರೂ, ಸಿದ್ಧಿಸದೆ ಇದ್ದರೂ ನಾವು ಸಮವಾಗಿಯೇ ಇರಬೇಕು. ಅಂದರೆ ಮಾನಸಿಕ ಸಮತೋಲನವನ್ನು ಕಾಯ್ದುಕೊಳ್ಳಬೇಕು. ಇದಕ್ಕೆ ನಿಷ್ಕಾಮಕರ್ಮದ ಆವಶ್ಯಕತೆ ಇದೆ. ಕೃಷಿ ಅಥವಾ ಯಾವುದೋ ಒಂದು ದೊಡ್ಡ ವ್ಯಾಪಾರವನ್ನು ಬಹಳ ಫಲಾಪೇಕ್ಷೆಯಿಂದ ಪ್ರಾರಂಭಿಸಿ, ಒಂದುವೇಳೆ ನಿರೀಕ್ಷಿತ ಫಲ ದೊರೆಯದಿದ್ದಲ್ಲಿ ಆಗ ಬಲವಾದ ಮಾನಸಿಕ ಆಘಾತವಾಗುವುದು. ಕೆಲವು ವೇಳೆ ಮುಂದೆ ಅದರಿಂದ ಚೇತರಿಸಿಕೊಳ್ಳಲೂ ಎಷ್ಟೋ ಜನರಿಗೆ ಸಾಧ್ಯವಾಗದಿರುವ ನಿದರ್ಶನಗಳಿವೆ. ನಷ್ಟ, ದುಃಖಗಳ ಅತಿರೇಕದಿಂದ ಮಾತ್ರ ಮಾನಸಿಕ ಆಘಾತವಲ್ಲ, ಸುಖದ ಅತಿರೇಕದಿಂದಲೂ ಮಾನಸಿಕ ಆಘಾತ ಸಂಭವಿಸಿದ ಘಟನೆಗಳಿವೆ. ಲಾಟರಿಯಲ್ಲಿ ಒಮ್ಮೆಲೇ ಬಹಳ ಹಣ ಬಂದಿತೆಂದೋ ಅಥವಾ ಇನ್ಯಾವುದೋ ಭಾರಿಸಂತೋಷದ ಸುದ್ದಿ ಕೇಳಿದಾಗ ಹೃದಯದಬಡಿತ ನಿಂತ ಉದಾಹರಣೆಗಳಿವೆ. ಸುಖದಿಂದಾಗಲೀ ದುಃಖದಿಂದಾಗಲೀ ಆಘಾತವಾಗದಂತೆ ಮಾನಸಿಕ ಸಮತೋಲನವನ್ನು ಕಾಯ್ದುಕೊಳ್ಳುವುದೇ ಬಹುದೊಡ್ಡ 'ಯೋಗ' ಅದನ್ನೇ ಶ್ರೀಕೃಷ್ಣ "ಸಮತ್ವಂ ಯೋಗ ಉಚ್ಯತೇ" ಎಂದಿದ್ದಾನೆ. ಇಂತಹ ಮಾನಸಿಕ ಸಮತೋಲನಕ್ಕಾಗಿ ನಿಷ್ಕಾಮಕರ್ಮಾಚರಣೆ ಅತ್ಯಾವಶ್ಯಕ.

ನಾವು ಮಾಡುವ ಪ್ರತಿಯೊಂದು ಒಳ್ಳೆಯ ಕರ್ಮವೂ ಭಗವಂತನ ಪೂಜೆ, ಸೇವೆ ಎಂದು ಬಗೆದು ಅದನ್ನು ಸರಿಯಾಗಿ ಮಾಡಿ ಅದರ ಫಲ ಎಲ್ಲವನ್ನೂ ಭಗವಂತನಿಗೇನೆ ಅರ್ಪಿಸುವುದು "ನಿಷ್ಕಾಮಕರ್ಮ" ಎನಿಸುತ್ತದೆ. ಬೆಂಕಿಯ ಜೊತೆ ಹೊಗೆ ಇರುವಂತೆ ಕರ್ತವ್ಯಗಳ ಜೊತೆಗೆ ಅನಿವಾರ್ಯವಾಗಿ ಸಂಭವಿಸುವ ದೋಷಗಳ ನಿವಾರಣೆಯೇ ಕರ್ಮಯೋಗದ ವೈಶಿಷ್ಟ್ಯ.

"ತಸ್ಮಾದ್ಯೋಗಾಯ ಯುಜ್ಯಸ್ವ, ಯೋಗಃ ಕರ್ಮಸು ಕೌಶಲಂ". ನಿಷ್ಕಾಮಕರ್ಮದ ಆಚರಣೆಯೇ ಕರ್ಮದ ಚಾತುರ್ಯ. ಅದೇ ಕರ್ಮದ ಕಲೆ ಎಂದ ಶ್ರೀಕೃಷ್ಣ. ಹಲಸಿನ ಹಣ್ಣು ಬಿಡಿಸಿ ತಿನ್ನಬೇಕು. ಆದರೆ ಕೈಗೆ ಮೇಣ ಅಂಟಬಾರದು. ಇದು ಕೈಗೆ ಜಿಡ್ಡು ಬಳಿದುಕೊಂಡಾಗ ಮಾತ್ರ ಸಾಧ್ಯ. ಅದರಂತೆ ಸಂಕುಚಿತ ಭಾವನೆ, ಸ್ವಾರ್ಥಗಳಿಲ್ಲದೆ ನಿಷ್ಕಾಮಭಾವನೆಯಿಂದ ಕಾರ್ಯವನ್ನು ಆಚರಿಸಿದಲ್ಲಿ ಕರ್ಮದಲ್ಲಿ ಮುಳುಗದೆ ಸಂಸಾರವನ್ನು ದಾಟಿಸಬಲ್ಲುದು ಈ ಕರ್ಮಯೋಗವೆಂಬ ಜಿಡ್ಡು. ನಿಷ್ಕಾಮಕರ್ಮದ ಚಮತ್ಕಾರವೇ ಅದು. ಇದ್ದರೂ ಇಲ್ಲದಂತೆ.'ಪದ್ಮಪತ್ರಮಿವಾಂಭಸಾ' ನೀರಿನಲ್ಲಿಯೇ ಹುಟ್ಟಿ, ನೀರಿನಲ್ಲಿಯೇ ಬೆಳೆದು ನೀರಿನಲ್ಲಿಯೇ ನಲಿಯುತ್ತಿದ್ದರೂ ನೈದಿಲೆಗೆ (ಕಮಲಕ್ಕೆ) ನೀರಿನ ಸೋಂಕೇ ಇಲ್ಲ. ಅದರಂತೆ ನಿಷ್ಕಾಮಕರ್ಮ.

ಕೃಷಿ, ವ್ಯಾಪಾರ ಮುಂತಾದವನ್ನು ಪ್ರಾರಂಭಿಸಿ ಅರ್ಧದಲ್ಲಿಯೇ ಬಿಟ್ಟರೆ ಅಪಾರ ಹಾನಿ ಕೆಲವು ವೇಳೆ ಅದರಿಂದ ಚೇತರಿಸಿಕೊಳ್ಳುವುದೇ ದುಸ್ತರವಾಗುತ್ತದೆ. ಆದರೆ ಈ ನಿಷ್ಕಾಮಕರ್ಮ ಹಾಗಲ್ಲ. ಇದನ್ನು ಸ್ವಲ್ಪವೇ ಮಾಡಿ ಅರ್ಧದಲ್ಲಿಯೇ ಬಿಟ್ಟರೂ ಯಾವುದೇ ನಷ್ಟವಿಲ್ಲ. ಇಷ್ಟೇ ಅಲ್ಲ ಎಷ್ಟು ಮಾಡಿದ್ದೇವೆಯೋ ಅಷ್ಟಕ್ಕೂ ಫಲವೂ ಸಹ ದೊರೆಯುತ್ತದೆ. ಪ್ರಾರಂಭ ಮಾಡಿದರೂ ಅಥವಾ ಪ್ರಾರಂಭಿಸುವೆವು ಎಂದು ಸಂಕಲ್ಪಿಸಿದರೂ ಅದಕ್ಕೆ ಫಲವಿದೆ. ಈ ನಿಷ್ಕಾಮಕರ್ಮದಲ್ಲಿ ಇಷ್ಟು ಸರಳ, ಸುಲಭ ಹಾಗೂ ನಿರಪಾಯಕಾರಿಯಾದುದು ಈ ನಿಷ್ಕಾಮಕರ್ಮ. ಇಂತಹ ಕರ್ಮವನ್ನು "ಎಷ್ಟು ಮಾಡಿದ್ದೇವೆ' ಎನ್ನುವುದಕ್ಕಿಂತ 'ಹೇಗೆ ಮಾಡಿದ್ದೇವೆ' ಎಂಬುದು ಬಹುಮುಖ್ಯ. ಬಹಳ ಕಾಗದಗಳಿಗಿಂತ ಗವರ್ನರರ ಸಹಿ ಇರುವ ನೋಟಿಗೆ ಬಹಳ ಬೆಲೆ ಇರುವಂತೆ ಭಕ್ತಿಯ ಮುದ್ರೆ ಹೊಂದಿದ ಕರ್ಮವು ಅಮೂಲ್ಯ. ಸುದಾಮ ಕೃಷ್ಣನಿಗೆ ಕೊಟ್ಟ ಅವಲಕ್ಕಿ ಒಂದು ಮುಷ್ಟಿ. ಆದರೆ ಅದರ ಹಿಂದಿನ ಭಕ್ತಿ ಅಪಾರವಾಗಿತ್ತು. ಅಂತಲೇ ಶ್ರೀಕೃಷ್ಣ ಸುದಾಮನಿಗೆ "ಹಿಡಿಯವಲಕ್ಕಿಗೆ ಅಖಿಳಾರ್ಥ" ಕೊಟ್ಟ ಎಂದಿದ್ದಾರೆ ಜಗನ್ನಾಥದಾಸರು. ಹೀಗೆ ಭಕ್ತಿಯಿಂದ ನಿಷ್ಕಾಮಕರ್ಮಾಚರಣೆ ಮಾಡಿದಲ್ಲಿ ಕರ್ಮಬಂಧನದಿಂದ ಬಿಡುಗಡೆಗೊಂಡು ಮುಕ್ತಿಯನ್ನೂ ಪಡೆಯಬಹುದಾಗಿದೆ.

ಧ್ರುವ ನಕ್ಷತ್ರ ಮುಟ್ಟದಿದ್ದರೂ ಅದು ಕಣ್ಣು ಮುಂದೆ ಇದ್ದರೆ ಹಡಗು ದಾರಿ ತಪ್ಪದಂತೆ ನಿಷ್ಕಾಮಕರ್ಮದ ಈ ದಿವ್ಯ ಸಂದೇಶದ ತುದಿಯನ್ನು ಮುಟ್ಟಲು ಸಾಧ್ಯವಿಲ್ಲದಿದ್ದರೂ ನಿರಾಶರಾಗಬೇಕಿಲ್ಲ. ಅದು ಕಣ್ಣು ಮುಂದೆ ಇದ್ದರೂ ದಾರಿ ತಪ್ಪುವ ಸಂಭವವಿಲ್ಲ. ಗೀತೆಯು ಇಂತಹ ಅಮೂಲ್ಯ ಸಂದೇಶಗಳನ್ನು ನೆನಪಿಸಿಕೊಳ್ಳುವುದು ಸೂಕ್ತವಾಗಿದೆ.

ಯತ್ರ ಯೋಗೇಶ್ವರಃ ಕೃಷ್ಣೋ
ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿಃ-
ಧ್ರುವಾನೀತಿರ್ಮತಿರ್ಮಮ ॥



## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಶ್ರೀ ಟೀಕಾಕೃತ್ಪಾದರು

ಪ್ರಪಂಚದಲ್ಲಿ ಎಲ್ಲ ಜ್ಞಾನಗಳಿಗಿಂತಲೂ ತತ್ತ್ವಜ್ಞಾನಕ್ಕೆ ಹೆಚ್ಚಿನ ಸ್ಥಾನವಿದೆ. ಏನೆಲ್ಲ ಸೌಕರ್ಯಗಳನ್ನು, ವಿಜ್ಞಾನದ ಬಲದಿಂದ ನಾವೆಲ್ಲ ಪಡೆದಿದ್ದರೂ ನಮಗೆ ಮನಸ್ಸಿನ ನೆಮ್ಮದಿಯು ದೊರೆಯಬೇಕಾದರೆ, ತತ್ತ್ವಜ್ಞಾನವೇ ನಮಗೆ ನೆರವು ನೀಡಬೇಕು. ಅದನ್ನೇ ನಾವು ಅಂತರಂಗದ ಅರಿವು ಎಂದು ಕರೆಯೋಣ. ಈ ತರಹದ ಅರಿವನ್ನು ಪಡೆಯಬೇಕಾದಾಗ, ಹಲವರು ಹಲವಾರು ರೀತಿಯಲ್ಲಿ ತಮಗೆ ಉಂಟಾದ ತಿಳಿವಳಿಕೆಯನ್ನು ಹಂಚಿದ್ದಾರೆ. ಈ ದಿಸೆಯಲ್ಲಿ ಪಾಶ್ಚಾತ್ಯ, ಪೌರ್ವಾತ್ಯ ದಾರ್ಶನಿಕರೆಲ್ಲರೂ ತಮ್ಮ ಪಾಲಿನ ಕಾರ್ಯವನ್ನು ನಿರ್ವಹಿಸಿದ್ದಾರೆ. ಆ ಮಾಲಿಕೆಯಲ್ಲಿಯೇ ಬರುವ ಅತ್ಯಂತ ಪ್ರಭಾವಿ ಮತ್ತು ಲೋಕ ಸತ್ಯವಾದ ತತ್ತ್ವಪ್ರಣಾಳಿಕೆಯೊಂದು, ದ್ವೈತಸಿದ್ಧಾಂತ.

ದ್ವೈತಸಿದ್ಧಾಂತದ ರಹಸ್ಯವನ್ನು ಇಂದಿಗೂ ನಾವು ಸೃಷ್ಟಿಕಾರ್ಯದ ಎಲ್ಲ ಹಂತಗಳಲ್ಲಿಯೂ ಕಾಣುತ್ತೇವೆ. ಜಡ–ಜೀವ–ಪರಮಾತ್ಮರ ಪರಸ್ಪರ ಭೇದವನ್ನು ಸೂಕ್ಷ್ಮಾತಿಸೂಕ್ಷ್ಮದಲ್ಲಿ ಸ್ಪಷ್ಟವಾಗಿ, ಸ್ವಲ್ಪ ನಿಶ್ಚಿಂತೆಯಿಂದ ಚಿಂತನ ಮಾಡಿದರೆ, ತಿಳಿದುಕೊಳ್ಳಲು ಸಾಧ್ಯವಿದೆ. ಈ ಕಾರ್ಯವನ್ನು ಶ್ರೀಮಧ್ವಾಚಾರ್ಯರು, "ನಾವು ಬೇರೆ; ಕಲ್ಲು ಬೇರೆ;" ಎಂದು ಪ್ರತಿಪಾದಿಸಿ ತೋರಿಸಿದರು. ಪ್ರಪಂಚದ ಜೀವನಾಡಿಯಾಗಿರುವ ತಾರತಮ್ಯ ಜ್ಞಾನವನ್ನು ಬಯಲಿಗೆಳೆದರು. ಅವರ ಈ ತರಹದ ತಾತ್ತ್ವಿಕ ಸಿದ್ಧಾಂತದ ತಿಳಿವಳಿಕೆಯ ಎಳೆಗಳನ್ನು ಶ್ರೀ ವ್ಯಾಸತೀರ್ಥರು ಈ ರೀತಿ ಗುರುತಿಸಿದ್ದಾರೆ. ಅವು ಇಂತಿವೆ :

1. ಹರಿಯೇ ಸರ್ವೋತ್ತಮ. 2. ಈ ಜಗತ್ತು ವಾಸ್ತವವಾಗಿ ಸತ್ಯ. 3. ಜಡ–ಜೀವ; ಜಡ–ಜಡ; ಜೀವ–ಜೀವ; ಜಡ–ಪರಮಾತ್ಮ; ಜೀವ–ಪರಮಾತ್ಮ– ಎಂಬ ಪಂಚಭೇದಗಳು ಸತ್ಯ. 4. ಜೀವರಾಶಿಯೆಲ್ಲ ಶ್ರೀಹರಿಗೆ ಅಧೀನವಾಗಿರುವುದು. 5. ಜೀವರು ತಮ್ಮೊಳಗೆ ಉಚ್ಚನೀಚರೆಂಬ ತಾರತಮ್ಯವನ್ನು ಹೊಂದಿದ್ದಾರೆ. 6. ತನ್ನ ಸ್ವರೂಪಕ್ಕೆ ಅನುಗುಣವಾದ ಸುಖವನ್ನು ಜೀವನು ಪಡೆಯುವುದೇ ಮೋಕ್ಷ. 7. ನಿರ್ದೋಷವಾದ ಭಕ್ತಿಯೇ ಮುಕ್ತಿಗೆ ಸಾಧನ. 8. ಪ್ರತ್ಯಕ್ಷ, ಅನುಮಾನ, ಆಗಮ ಎಂಬ ಮೂರು ಪ್ರಮಾಣಗಳು. 9. ಎಲ್ಲ ವೇದಗಳಿಂದ ಮಾತ್ರವೇ ಶ್ರೀಹರಿಯನ್ನು ತಿಳಿಯಲು ಸಾಧ್ಯ.

ಈ ತತ್ತ್ವಗಳನ್ನು ನಿಚ್ಚಳವಾಗಿ ನಿರೂಪಿಸಲು ಶ್ರೀ ಮಧ್ವಾಚಾರ್ಯರು ಮೂವತ್ತೇಳು ಗ್ರಂಥಗಳನ್ನು ರಚನೆ ಮಾಡಿದರು. ಆ ಗ್ರಂಥಗಳು, ಕಾಲವು ಗತಿಸಿದಂತೆ, ಸಾಮಾನ್ಯರ ನಿಲುವಿಗೆ ನಿಲುಕದ ತುತ್ತಾದುವು. ಆ ಸಂಸ್ಕೃತದಲ್ಲಿಯ ವಿವರಣೆಯು ಅರ್ಥವಾಗಬೇಕಾದರೆ ಟೀಕೆ–ಟಿಪ್ಪಣಿ ಬೇಕಾಯಿತು. ಆ ಕಾರ್ಯವನ್ನು ಎಸಗಿದವರೇ ಶ್ರೀ ಟೀಕಾಕೃತ್ಪಾದರೆಂದು ಹೆಸರಾಗಿರುವ ಶ್ರೀ ಜಯತೀರ್ಥರು.

ಜಯತೀರ್ಥರ ಜೀವನವು ಲೌಕಿಕದ ತುತ್ತ ತುದಿಯನ್ನು ಮುಟ್ಟಬೇಕಾದದ್ದು, ಭಕ್ತಿ ಜ್ಞಾನ ವೈರಾಗ್ಯಗಳ ತುತ್ತ ತುದಿಯನ್ನು ಮುಟ್ಟಿದುದು ಒಂದು ಪವಾಡವೇ ಸರಿ. ಏಕೆಂದರೆ ಜಯತೀರ್ಥರ ತಂದೆತಾಯಿಗಳು ದೊಡ್ಡ ಶ್ರೀಮಂತರು. ದೇಶಪಾಂಡೆ ಮನೆತನ. ಪಂಢರಪುರದಿಂದ ಹನ್ನೆರಡು ಮೈಲು ದೂರದಲ್ಲಿರುವ ಮಂಗಳವೇಢೆ ಗ್ರಾಮದವರು. ಅವರಿಗೆ, ಅಪರೂಪಕ್ಕೆ ಇವರೊಬ್ಬರೇ ಮಗ. ತಮ್ಮ ಮಗ ಶಾಶ್ವತವಾಗಿ ಕಲ್ಲಿನಂತೆ ಬಾಳಲಿ ಎಂದೋ ಏನೋ ಅವರಿಗೆ, ಧೋಂಡೋರಾಯ ಎಂದು ಹೆಸರಿಟ್ಟಿದ್ದರು. ಧೋಂಡೋರಾಯನು ಬಾಲ್ಯದಲ್ಲಿ ಕ್ಷತ್ರಿಯನಂತೆ ಬೆಳೆದ. ಸುಕುಮಾರನಾಗಿ ಬೆಳೆದ. ಅವನ ಸೌಕುಮಾರ್ಯಕ್ಕೆ ತಕ್ಕಂತೆ ಮದುವೆಯೂ ಆಯಿತು. ಮದುವೆಯ ನಂತರ ಬೇಟೆಯ ವಿನೋದಕ್ಕಾಗಿ ಈ ಸುಕುಮಾರ ಇಂದಿನ ಕರ್ನಾಟಕ ರಾಜ್ಯದ ಕಲಬುರಗಿ ಜಿಲ್ಲೆಯ ಮಾನ್ಯಖೇಟದ ಬಳಿ ಕಾಗಿನಾ ನದಿಯವರೆಗೆ ಬಂದ. ನದಿ ತುಂಬಿ ಸೂಸಿ ಹರಿಯುತ್ತಿತ್ತು. ಈ ಕುದುರೆಯ ಸವಾರಿ ಸುಕುಮಾರನಿಗೆ ಬಾಯಾರಿಕೆ. ಕುದುರೆಯ ಮೇಲೆಯೇ ಕುಳಿತು ನೀರು ಕುಡಿದ. ಬಹುಶಃ ಪೂರ್ವ ಜನ್ಮದ ಅಭ್ಯಾಸವೇ ಇದು ಆಗಿರಬೇಕು;

ಪೂರ್ವಸೂಚನೆಯಂತೆ ಇದನ್ನೇ ಕಾದು ಕುಳಿತಿದ್ದ ಶ್ರೀಮಧ್ವಾಚಾರ್ಯರ ಪರಂಪರೆಯಲ್ಲಿ ಬಂದ ಶ್ರೀ ಅಕ್ಷೋಭ್ಯತೀರ್ಥರು ಈತನೇ ತಮ್ಮ ಉತ್ತರಾಧಿಕಾರಿಯಾಗುವ ಶಿಷ್ಯನೆಂದು ಗುರುತಿಸಿ, ಈ ಜನ್ಮದಲ್ಲಿ ಯಾವ ತಾತ್ತ್ವಿಕ ಸಂಸ್ಕಾರಗಳಿಗೂ ಒಳಗಾಗದ ಧೋಂಡೋರಾಯರೆಂಬ ಶಿಲೆಯನ್ನು ಕೆತ್ತಿ ದ್ವೈತಸಿದ್ಧಾಂತದ ಜಟಿಲವಾದ ತತ್ತ್ವಗಳನ್ನು ತಿಳಿಸುವ ಸ್ವರಗಳನ್ನು ಅಲ್ಲಿಂದ ಹೊರಡಿಸಿದರು. ಅಂದಿನಿಂದ ಮಾನ್ಯಖೇಟವು ದ್ವೈತ ಸಿದ್ಧಾಂತದ ಸ್ಫೂರ್ತಿಯ ಕೇಂದ್ರವಾಯಿತು. ಧೋಂಡೋರಾಯನು ಶ್ರೀ ಜಯತೀರ್ಥರಾದರು.

**ಪ್ರೊ|| ವಸಂತಕುಷ್ಟಗಿ**

ಜಯತೀರ್ಥರೂ ಮಧ್ವಾಚಾರ್ಯರಂತೆ ಅವತಾರಿ ಪುರುಷರು. ಜಯತೀರ್ಥರು ಇಂದ್ರ, ಅರ್ಜುನ, ಎತ್ತಾದರೆ – ಮಧ್ವಾಚಾರ್ಯರು ವಾಯು, ಹನುಮ, ಭೀಮರು–ಜಯತೀರ್ಥರು ಎತ್ತಿನ ಅವತಾರದಲ್ಲಿದ್ದಾಗ ಮಧ್ವಾಚಾರ್ಯರ ಆಶ್ರಯವನ್ನು ಪಡೆದಿದ್ದು, ಅವರ ಗ್ರಂಥಗಳನ್ನು ಹೊತ್ತು ತರುವ ಕಾರ್ಯದಲ್ಲಿ ನಿರತವಾಗಿದ್ದಂತೆ ನಂಬಿಕೆ. ಆ ಸಂದರ್ಭದ ಬೀಡುಗಳಲ್ಲೆಲ್ಲ ನಡೆಯುತ್ತಿದ್ದ ಪಾಠ ಪ್ರವಚನಗಳನ್ನು ಆ ಎತ್ತಿನ ರೂಪದಲ್ಲಿ ಅವರು ಆಲಿಸುತ್ತಿದ್ದರಂತೆ.

ಒಂದು ಸಲ ಮಧ್ವಾಚಾರ್ಯರು ತಮ್ಮ ಗ್ರಂಥಗಳಿಗೆ ಮುಂದೆ ಟೀಕೆಗಳನ್ನು ಬರೆಯುವ ಶಕ್ತಿಯು ಯಾರಿಗಾದರೂ ಇದ್ದರೆ ಈ ಎತ್ತಿಗೆ ಎಂದರಂತೆ. ಅದನ್ನು ಕೇಳಿದ ಒಬ್ಬ ದುರಭಿಮಾನಿ ಅದಕ್ಕೆ ಹಾವು ಕಚ್ಚಲಿ ಎಂದನಂತೆ. ಆ ಶಾಪ ಸತ್ಯವಾದರೂ ಆಚಾರ್ಯರ ದ್ವಾದಶ ಸ್ತೋತ್ರದಿಂದ ಅದು ಬದುಕಿತಂತೆ. ಮೂಕ ಪ್ರಾಣಿಗಳ ಯೋಗ್ಯತೆಯನ್ನು ಗುರುತಿಸಿದ, ಆ ಮನುಷ್ಯ ಶಿಷ್ಯ ಬದುಕಿ ಬಂದ ಎತ್ತಿನ ಪಕ್ಕಕ್ಕೆ ಹೋಗಿ ಆಲಿಸಿದಾಗ ಅದು ದ್ವಾದಶಸ್ತೋತ್ರವನ್ನು ಪಠಿಸುತ್ತಿತ್ತಂತೆ. ಆ ಎತ್ತೇ ಇಂದು ಟೀಕೆಗಳನ್ನು ನೀಡಿದ ಟೀಕಾಕೃತ್ಪಾದರು ಎಂದರೆ ಯಾವನ ಎದೆ ಭಕ್ತಿಯಿಂದ ಉಕ್ಕುವ ಶರಧಿಯಾಗಲಿಕ್ಕಿಲ್ಲ! ಇದೇ ಸಂದರ್ಭದಲ್ಲಿ, ಹಿಂದೆ ಇದೇ ಎತ್ತು ಅರ್ಜುನನಾಗಿದ್ದಾಗ, ತಾನು ಮಲಗಿದ್ದರೂ ತನ್ನ ರೋಮ ರೋಮದಿಂದ ಕೃಷ್ಣ ಕೃಷ್ಣ ಎಂದು ಸ್ತೋತ್ರ ಮಾಡುತ್ತಿತ್ತೆಂಬುದನ್ನು ನೆನೆಯಬಹುದು. ಅದರ ಹಿನ್ನೆಲೆಯಲ್ಲಿ ಇಂದಿನ ಟೀಕಾಕೃತ್ಪಾದರ ಭಕ್ತಿಜ್ಞಾನ ವೈರಾಗ್ಯಗಳ ವೈಶಿಷ್ಟ್ಯವನ್ನೂ ಗುರುತಿಸಬಹುದು.

ಹೀಗೆ ಜಯತೀರ್ಥರು ಅಕ್ಷೋಭ್ಯತೀರ್ಥರಿಂದ ಸಂನ್ಯಾಸ ಸ್ವೀಕರಿಸಿದ ಸಮಾಚಾರ ಅವರ ತಂದೆ ತಾಯಿಗಳಿಗೆ ತಿಳಿದ ಮೇಲೆ ಅವರಿಗೆ ಸಹಜವಾಗಿಯೇ ಪುತ್ರವ್ಯಾಮೋಹವು ಆವರಿಸಿತು. ಅದೇ ಕಾಲದಲ್ಲಿ ಅವರು ಬಂದು, ಇವರನ್ನು ತಮ್ಮೂರಿಗೆ ಕರೆದೊಯ್ದು, ಸಂಸಾರ ಜಾಲದಲ್ಲಿ ಹಾಕಲು ಪ್ರಯತ್ನಿಸಿದರು. ಆದರೆ ಸರ್ಪ ಸಂಕೇತಿಕ ಸಂಸಾರವಾದಾಗ, ಪತ್ನಿಯರು ಗೌರವದಿಂದ ನಮಸ್ಕರಿಸಿದರು. ಈ ಸಾದೃಶ್ಯದಿಂದ ಮುಂದೆ ಅವ್ಯಾಹತವಾಗಿ ಅವರು ಸನ್ಯಾಸಿಗಳಾಗಿ ತಮ್ಮ ಜ್ಞಾನ ಬಲದಿಂದ ಭಾರತೀಯ ತತ್ತ್ವಜ್ಞಾನಕ್ಕೆ, ಶ್ರೀಮದಾಚಾರ್ಯರು ನೀಡಿದ ಪ್ರಣಾಳಿಕೆಯ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಬೆಳಕನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಬೆಳಗಿಸಲು ಪ್ರಯತ್ನಪಟ್ಟರು. ಆ ಪ್ರಯತ್ನದ ಫಲವೇ ಅವರು ರಚನೆ ಮಾಡಿದ ಹದಿನೆಂಟು ಟೀಕಾಗ್ರಂಥಗಳು. ಅವುಗಳಾವುವು ಎಂದರೆ:

ಶ್ರೀಗೀತಾಭಾಷ್ಯ, ಶ್ರೀ ಗೀತಾತಾತ್ಪರ್ಯ, ಶ್ರೀಮತ್ಸೂತ್ರ ಭಾಷ್ಯ, ಶ್ರೀಮದನು ವ್ಯಾಖ್ಯಾ, ಋಗ್ಭಾಷ್ಯ, ಈಶಾವಾಸ್ಯ ಮತ್ತು ಷಟ್ಪ್ರಶ್ನ ಉಪನಿಷದ್ಭಾಷ್ಯ, ಪ್ರಮಾಣ ಲಕ್ಷಣ ದ್ವಿದಶ ಪ್ರಕರಣಗಳು, ಶ್ರೀಮನ್ನ್ಯಾಯ ಸುಧಾ,

ಇತ್ಯಾದಿ. ಈ ಟೀಕಾ ಗ್ರಂಥಗಳಲ್ಲದೆ,

ಶ್ರೀಪ್ರಮಾಣಪದ್ಧತಿ, ವಾದಾವಲೀ,
ಶ್ರೀಪದ್ಯಮಾಲಾ, ಶತಾಪರಾಧಸ್ತೋತ್ರ,
ಅಧ್ಯಾತ್ಮಾಮೃತ ತರಂಗಿಣಿ, ಇತ್ಯಾದಿ–

ಸ್ವತಂತ್ರವಾದ ಕೃತಿಗಳನ್ನು ರಚಿಸಿ ದ್ವೈತ ಸಿದ್ಧಾಂತದ ತಿಳಿವಳಿಕೆಯನ್ನು ಹೆಚ್ಚಿಸಿದ್ದಾರೆ. ಅಲ್ಲದೆ ಇವುಗಳ ಆಧಾರದಿಂದ ದಾಸರು ಕನ್ನಡದಲ್ಲಿ ಅದೇ ತತ್ತ್ವಗಳನ್ನು ನಿಚ್ಚಳವಾಗಿ ಹಾಡಲು ಸಾಧ್ಯವಾಯಿತು. ಅದರಲ್ಲಿಯೂ ಅವರ ಶ್ರೀಮನ್ನ್ಯಾಯ ಸುಧಾಗ್ರಂಥವನ್ನು ಎಷ್ಟು ಸಲ ಪಾರಾಯಣ ಮಾಡಿದರೂ ಕಡಮೆ ಎಂದು ಸಾರ್ವತ್ರಿಕ ಅಭಿಪ್ರಾಯ. ಏಕೆಂದರೆ ಆ ಗ್ರಂಥದ ಒಂದೊಂದು ಸಲದ ಪಾರಾಯಣದಲ್ಲಿ ಒಂದೊಂದು ಬಗೆಯ ಹೊಸ ಹೊಸ ಅರ್ಥಗಳು ಹೊಳೆಯುತ್ತವೆ. ಅಂತೆಯೇ ಅವರು ಬದುಕಿರುವಾಗಲೇ ಈ ಗ್ರಂಥವನ್ನು ಅನೇಕಸಲ ಆನೆಯ ಮೇಲಿನ ಅಂಬಾರಿಯಲ್ಲಿರಿಸಿ, ಅಭಿಮಾನಿಗಳು ಮೆರೆಸಿದ್ದುಂಟು. ಅವರ ಯೋಗ್ಯತೆಗೆ ಇದೇನು ಸೋಜಿಗದ ವಿಷಯವಲ್ಲ.

ಇಂತಹ ಜಯತೀರ್ಥರ ಬಹುಪಾಲು ಜೀವನವು ಯರಗೋಳದ ಗುಹೆಯಲ್ಲಿಯೂ, ಕಾಗಿನಾ ತೀರದ ಮಳಖೇಡದಲ್ಲಿಯೂ ಸಾಗಿತು. ಅವರು ತಮ್ಮ ಕೊನೆಯ ಗಳಿಗೆಯಲ್ಲಿ ಮಳಖೇಡದಲ್ಲಿಯೇ, ಅಕ್ಷೋಭ್ಯತೀರ್ಥರ ವೃಂದಾವನದ ಪಕ್ಕದ, ಆಗಲೇ ಅಣಿಯಾಗಿದ್ದ, ವೃಂದಾವನದಲ್ಲಿಯೇ ಸಶರೀರಿಗಳಾಗಿಯೇ ಕ್ರಿ. ಶ. 1387ರಲ್ಲಿ ಚಿರಸ್ಥಾಯಿಯಾದರು. ತತ್‌ಕ್ಷಣ ವೃಂದಾವನವು ಇದ್ದ ಗುಹೆಯ ಬಾಗಿಲುಗಳನ್ನು ಮುಚ್ಚಲಾಯಿತು. ಕೂಡಲೇ ವೃಂದಾವನದ ಮೇಲೆ ಸರ್ಪದ ಚಿಕ್ಕೆಗಳು ಮೂಡಿ ಬಂದುವು. ಇದೆಲ್ಲ ನಡೆದದ್ದು ಆಷಾಢ ಬಹುಳ ಪಂಚಮಿಯ ದಿವಸ. ಇಂದಿಗೂ ಆ ದಿನವನ್ನು ಅತ್ಯಂತ ಶ್ರದ್ಧೆಯಿಂದ ನೆನೆದು ಪ್ರತಿ ವರ್ಷವೂ ಆರಾಧನೆಯು ನಡೆಯುತ್ತದೆ. ದೇಶದ ನಾನಾ ಭಾಗಗಳಿಂದ ಭಕ್ತಾದಿಗಳು ಸಾವಿರದ ಸಂಖ್ಯೆಯಲ್ಲಿ ಬರುತ್ತಾರೆ. ಇಲ್ಲಿ ಬರುವವರೆಲ್ಲ ಐಹಿಕ ಭಾಗ್ಯಗಳನ್ನು ಕೇಳಬಂದವರಲ್ಲ. ಭಕ್ತಿ ಜ್ಞಾನ ವೈರಾಗ್ಯ ಆರೋಗ್ಯಗಳನ್ನು ಕೇಳಬಂದವರು.

ಅಂತೆಯೇ ಕನ್ನಡ ಹರಿದಾಸರು,

ಅರ್ಥಿವಂದಾರ ವೇದಾರ್ಥ ವಿಚಾರ ಸಮರ್ಥ

ಎಂದೂ,

ಕಾಮಗೆದ್ದರಾ ಹರಿಗೆ ಪ್ರೇಮಾಪೂರ್ಣರಾ
ನೇಮ ನಿತ್ಯರಾ ನಿಷ್ಕಾಮನಾಪರ

ಎಂದೂ,

ಟೀಕಾಕೃಜ್ಜಯರಾಯರ ಸೇವಿಸಿರೋ
ಸೌಖ್ಯದಿ ಜೀವಿಸಿರೋ
ಆ ಕೈವಲ್ಯಾಪದವೇಕ್ಷಿತ ಸುಜನರು
ಮರೆಯದೆ ಹಗಲಿರುಳು

ಎಂದೂ,

'ಜ'ಯೆಂದು ನುಡಿಯಲು ಜಯಶೀಲನಾಗುವ
'ಯ'ಯೆಂದು ನುಡಿಯಲು ಯಮನಂಜುವ
'ತೀ'ಯೆಂದು ನುಡಿದರೆ ತಿಮಿರ ಪಾತಕ ಹಾನಿ
'ರ್ಥ'ಯೆಂದು ನುಡಿದರೆ ತಾಪತ್ರಯ ಪರಿಹಾರ

ಎಂದೂ ಯಥಾರ್ಥವಾಗಿ ಅವರ ಹಿರಿಮೆಯನ್ನು ಗುರುತಿಸಿ ವರ್ಣಿಸಿ ಸಾರ್ಥಕ್ಯಪಡೆದಿದ್ದಾರೆ. ಅಷ್ಟೇ ಅಲ್ಲ, ಪಾಶ್ಚಾತ್ಯರಿಂದಲೂ, ಇವರೊಬ್ಬ ಭಾರತೀಯ ತತ್ತ್ವಜ್ಞಾನದ ವಿಶಿಷ್ಟ ಆಸ್ತಿ ಎಂಬ ಮೆಚ್ಚಿಕೆಯನ್ನು ಪಡೆದಿದ್ದಾರೆ.

ಆದರೆ ಇಷ್ಟೆಲ್ಲ ಇದ್ದರೂ ಒಂದು ವಿಷಯ ಮಾತ್ರ ಸಮಸ್ಯೆಯಾಗಿಯೇ ಉಳಿದಿದೆ. ಅದೆಂದರೆ, ಕನ್ನಡ ಹರಿದಾಸರು, 'ಸಾರಿಭಜಿಸಿರೋ ಟೀಕಾರಾಯರಂಘ್ರಿಯ, ಘೋರ ಪಾತಕಾಂಬುಧಿಯ ಪಾರುಮಾಳ್ಪರ' ಎಂದು ಹೃದಯ ಸ್ಪರ್ಶಿಯಾಗಿ ತಾಳಮೇಳದಲ್ಲಿ ಅವರನ್ನು ಕುರಿತು ಹಾಡಿ ಕುಣಿದಿದ್ದರೂ, ಅವರ ಒಂದಾದರೂ ಕೃತಿ ಕನ್ನಡದಲ್ಲಿ ಈವರೆಗೂ ಏಕೆ ಸಿಕ್ಕಿಲ್ಲ ಎಂಬುದು. ಅವರು ಬದುಕಿದ್ದು ಬಾಳಿದ್ದು ಕರ್ನಾಟಕವಾಗಿದ್ದರೂ ಅವರು ಬರೆದಿರಬಹುದಾದ ತಿಳಿಗನ್ನಡದ ಕೃತಿಗಳ ಸಂಶೋಧನೆಯು ಇನ್ನೂ ಏಕೆ ನಡೆದಿಲ್ಲ ಎಂದು! ಈ ದಿಸೆಯಲ್ಲಿ ನಮ್ಮ ಸಂಶೋಧಕರು ಮುಂದೆ ಬಂದು ಹೂತಿರುವ ಆಸ್ತಿಯನ್ನು ಬಯಲಿಗೆ ತಂದರೆ ಕನ್ನಡ ತವನಿಧಿಯ ಮೌಲ್ಯವು ಇನ್ನೂ ಹೆಚ್ಚುತ್ತದೆಂಬ ಆಸೆ. ಹೊಸ ಆಯಾಮ ದೊರೆತೀತೆಂಬ ಅಪೇಕ್ಷೆ. ಇದಕ್ಕೆಲ್ಲ ಟೀಕಾರಾಯರು ಬೇಗ ಪ್ರೇರಕರಾಗಲೆಂದು ಪ್ರಾರ್ಥನೆ.



# ಸಾಮಾಜಿಕ ಬದುಕಿನಲ್ಲಿ ನೀತಿಯ ಮಹತ್ವ

ಸಾಹಿತ್ಯದ ಮೂಲ ಉದ್ದೇಶ ಆನಂದವಾದರೂ ಆನುಷಂಗಿಕವಾಗಿ ಬರುವ ನೀತಿಯು ಮಹತ್ವವಾದುದೇ. ಕಾವ್ಯಗಳು ಯಶಸ್ಸು, ಅರ್ಥ, ವ್ಯವಹಾರಜ್ಞಾನ, ಶಿವೇತರಕ್ಷಣೆ, ಸದ್ಯಃಪರನಿವೃತ್ತಿ, ಕಾಂತಾಸಂಮಿತ ಉಪದೇಶಗಳನ್ನು ನಮಗೆ ನೀಡಿ ಸರಿದಾರಿಯಲ್ಲಿ ಕೊಂಡೊಯ್ಯುತ್ತವೆಂದು ಪ್ರಾಚೀನ ಮೀಮಾಂಸಕರು ಸಾರಿದ್ದಾರೆ. ಆಧುನಿಕ ವಿಮರ್ಶಕರ ದೃಷ್ಟಿಯಲ್ಲಿ ಕಾವ್ಯ ಕೇವಲ ನೀತಿಬೋಧಕವಾಗಿರಬಾರದು. ನೀತಿಯೇ ಪ್ರಧಾನವಾದರೆ ಕಾವ್ಯಭಾವದಿಂದ ವಂಚಿತವಾಗುತ್ತದೆ. ಬರಿಯ ನೀತಿಬೋಧಕ ಕೃತಿಯಾಗುತ್ತದೆ. ಕಾವ್ಯದಲ್ಲಿ ನೀತಿ ಸಾಹಿತ್ಯಾಂಶದ ಜೊತೆಯಲ್ಲಿ, ಪಾತ್ರಗಳ ಮನೋವ್ಯಾಪಾರದ ಹಿನ್ನೆಲೆಯಲ್ಲಿ ಪರೋಕ್ಷವಾಗಿ ಮೂಡಿಬರಬೇಕು. ಆ ಮೂಲಕ ರಸಾಸ್ವಾದನಗೆ ಅನುಕೂಲವಾಗುತ್ತದೆ ಎನ್ನುತ್ತಾರೆ.

ಪ್ರಾಚೀನ ಸಾಹಿತ್ಯವೆನಿಸಿದ ವೇದೋಪನಿಷತ್ತು, ರಾಮಾಯಣ, ಮಹಾಭಾರತ, ಭಾಗವತದಂಥ ಕೃತಿಗಳಾಗಲಿ, ಅಥವಾ ನೀತಿಯನ್ನೇ ಹೇಳಹೊರಟ ಸಂಸ್ಕೃತ ಕೃತಿಗಳಾದ ನೀತಿದ್ವಿಷಷ್ಟಿಕಾ (ಸುಂದರ ಪಾಂಡು), ಶತಕತ್ರಯ (ಭರ್ತೃಹರಿ), ಶಂಕರರ 'ಮೋಹಮುದ್ಗರ', ಜಲ್ಹಣನ 'ಮುಗ್ಧೋಪದೇಶ' — ಮುಂತಾದವುಗಳ ಉದ್ದೇಶ ಜೀವನಕ್ಕೆ ಮಾರ್ಗದರ್ಶನ ನೀಡುವುದೇ ಆಗಿದೆ. ಇವುಗಳಲ್ಲಿ ಕಾಣುವುದು ಧರ್ಮ, ನೀತಿ, ತತ್ತ್ವ, ಒಳಿತು ಕೆಡುಕುಗಳ, ಸ್ವಾರ್ಥ–ತ್ಯಾಗಗಳ, ಹಿತ–ಅಹಿತಗಳ, ಸದ್ಗುಣ–ದುರ್ಗುಣಗಳ ರೀತಿ ನೀತಿಗಳನ್ನು ಮತ್ತು ಅವುಗಳ ಪರಿಣಾಮದಿಂದಾಗುವ ಸುಖದುಃಖಗಳನ್ನು. ಇವುಗಳನ್ನು ನಾವು ಅಭ್ಯಾಸಮಾಡಿದಲ್ಲಿ ಅಥವಾ ಕೇಳಿದಲ್ಲಿ ನಮ್ಮ ಮನಸ್ಸಿನ ಮೇಲೆ ಪರಿಣಾಮವಾಗುವುದಂತೂ ಖಂಡಿತ. ಅದಕ್ಕಾಗೇ ಗ್ರೀಕ್ ದಾರ್ಶನಿಕ ಅರಿಸ್ಟಾಟಲ್ ಕಾವ್ಯದ ಉದ್ದೇಶ 'ಕೆಥಾರ್ಸಿಸ್' ಗುಣದಿಂದ ಕೂಡಿದ್ದು ಅವು ನಮ್ಮ ಮನಸ್ಸಿನ ಸೂತಕ ಕಳೆದು ಸದ್ಭಾವನೆಯನ್ನುಂಟು ಮಾಡುತ್ತವೆ ಎಂದು ಸಾರಿದನು. ಕವಿ ಡಿ. ವಿ. ಜಿ. ಯವರು

ವೇದಗಳು ಶಾಸ್ತ್ರಗಳು ಲೋಕ
ನೀತಿಗಳೆಲ್ಲ
ಹಾದಿ ತೋರಲು ನಿಶೆಯೊಳುರಿವ
ದಂಜುಗಳು

ಎಂದು ಶಾಸ್ತ್ರಾದಿ ಸಾಹಿತ್ಯಾಕೃತಿಗಳ ಉದ್ದೇಶವನ್ನು ತಿಳಿಸಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಕಾವ್ಯಗಳಾದ ಕವಿರಾಜಮಾರ್ಗದಿಂದ ಹಿಡಿದು ಆಧುನಿಕ ಕಾವ್ಯ ಕುವೆಂಪುರವರ ಶ್ರೀ ರಾಮಾಯಣದರ್ಶನಂವರೆಗೆ ಎಲ್ಲವೂ ಮಾನವನ ಒಳಿತನ್ನೇ ಉದ್ದೇಶವಾಗಿಟ್ಟುಕೊಂಡು ಬರೆದಂಥವು. ಆದರಿಂದಲೇ ಕುವೆಂಪು "ಪಾಪಿಗಂ ಉದ್ಧಾರವಿಹುದೈ ಈ ಜಗದ್ವ್ಯೂಹ ರಚನೆಯುಲಿ" ಎಂದು ಸಾರಿದ್ದು. ಕನ್ನಡದ ವಡ್ಡಾರಾಧನೆ, ಪಂಪಭಾರತ, ಆದಿಪುರಾಣ, ಗದಾಯುದ್ಧ, ಜಗನ್ನಾಥ ವಿಜಯ, ಪಂಚತಂತ್ರ, ಕರ್ಣಾಟಕ ಕಾದಂಬರಿ, ವಚನಸಾಹಿತ್ಯ, ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಮೋಹನ ತರಂಗಿಣಿ, ಹದಿಬದೆಯ ಧರ್ಮ, ರಾಮಾಶ್ವಮೇಧದಂಥ ಕಾವ್ಯಗಳು ಮಾನವ ವ್ಯಾಪಾರಗಳ ಹಿನ್ನೆಲೆಯಲ್ಲಿ ಸರಿ-ತಪ್ಪುಗಳನ್ನು ಎತ್ತಿತೋರಿ ನಮ್ಮ ಅಂತರ್ದೃಷ್ಟಿಯನ್ನು ತೆರೆಸುತ್ತಲೇ ಬಂದಿವೆ. ನೀತಿ ಬೋಧಕ ಕೃತಿಗಳಾಗಿ ಸೋಮೇಶ್ವರಶತಕ, ಸರ್ವಜ್ಞನ ತ್ರಿಪದಿ, ಗಳಂಥವೂ ಬಂದವು.

ನೀತಿ ಎಂದರೆ ಯುಕ್ತಾಯುಕ್ತ ವಿವೇಚನೆಯಿಂದ ನಾಗಲು ಹೇಳಿದ ಅನುಭವದ ಸಾರ, ಹಾಗೂ ಅಲ್ಪಕ್ಕಾಶಿಸಿ ಮಾರ್ಗ ತಪ್ಪಿ ನಡೆಯದಿರುವುದು. ಸರಿತಪ್ಪುಗಳ ವಿವೇಚನೆಯ, ಪಾಪಪುಣ್ಯ, ಧರ್ಮ-ಅಧರ್ಮಗಳ ಮೂಲಕ ಮಾನವೀಯತೆಯನ್ನು ಬೆಳೆಸುವ ಮನೋಸಂಹಿತೆ ಎನ್ನಬಹುದು.

ಸಂಸ್ಕೃತದಲ್ಲಿ ನೀತಿಶತಕ ಬರೆದ ಭರ್ತೃಹರಿ ಮಾನವರನ್ನು ನಾಲ್ಕು ವಿಧದವರನ್ನಾಗಿ ವಿಂಗಡಿಸಿದ್ದಾನೆ. 1. ಪರಹಿತ ಸಾಧಿಸುವ ಸತ್ಪುರುಷರು. 2. ಸ್ವಹಿತ – ಪರಹಿತ ಸಾಧಿಸುವ ಸಾಮಾನ್ಯರು. 3. ಸ್ವಾರ್ಥಕ್ಕಾಗಿ ಪರಹಿತ ಕೆಡಿಸುವವರು (ನೀಚರು). 4. ನಿರರ್ಥಕವಾಗಿ ಪರಹಿತ ಕೆಡಿಸುವವರು (ರಾಕ್ಷಸರು). ಈತ ಹೇಳುವಂತೆ ಸಜ್ಜನರು ಹುಟ್ಟಿನಿಂದಲೇ ಪರೋಪಕಾರಿಗಳಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ 'ಮಹಾತ್ಮ' ಎನ್ನಿಸುವವನ ಲಕ್ಷಣಗಳನ್ನು ತಿಳಿಸುತ್ತಾ ಸಜ್ಜನರ ಸಂಗದಲ್ಲಿ ಬಯಕೆ, ಗುಣದಲ್ಲಿ ಪ್ರೀತಿ, ಹಿರಿಯರಲ್ಲಿ ಗೌರವ, ವಿದ್ಯೆಯ ವ್ಯಸನ, ಹೆಂಡತಿಯಿಂದಲೇ ರತಿಸುಖ, ಜನಾಪವಾದದ ಭಯ, ಶಿವಭಕ್ತಿ, ಇಂದ್ರಿಯ ನಿಗ್ರಹ ಮುಂತಾದ ಗುಣಗಳುಳ್ಳವರ ಪ್ರಕೃತ ಇಂಥ ಸಕಲ ಗುಣಸಂಪನ್ನರು. ಅಲಭ್ಯರೆನಿಸಿದರೂ, ಪ್ರಾಚೀನರಲ್ಲಿ ಹೆಚ್ಚಾಗಿ ಈ ಗುಣಗಳು ಸಹಜವಿದ್ದವು. ಉದಾ, ನಮ್ಮ ಋಷಿಗಳು, ಪರಮಹಂಸ, ಗಾಂಧಿಯಂಥವರು. ಭರ್ತೃಹರಿ ಹೇಳುವಂತೆ ಮಾನವ ಸ್ವಾಭಿಮಾನಿಯಾಗಿರಬೇಕು. ಅನ್ಯಾಯವನ್ನು ಪ್ರತಿಭಟಿಸುವ ಸ್ಥೈರ್ಯವಂತನಾಗಿ ಸಿಂಹದಂತೆ ಹೋರಾಡಬೇಕು. ಅದಕ್ಕಾಗಿ ಯುಕ್ತಾಯುಕ್ತ ವಿವೇಚನೆಗೊಳ್ಳುವ ಜ್ಞಾನ ಮುಖ್ಯ. ಇಲ್ಲದಲ್ಲಿ ತಾನೂ ಮೂರ್ಖನಾಗಿ ಅಂಥವರ ಸಹವಾಸದಿಂದ ಸಾಮಾಜಿಕ ಕ್ಷೋಭೆಗೆ ಕಾರಣನಾಗುತ್ತಾನೆ ಎಂದು ತಿಳಿಸುತ್ತಾ ಇಂಥವರ ಸಹವಾಸ ಎಂದಿಗೂ ಸಲ್ಲ ಎನ್ನುತ್ತಾನೆ. ಆತ ಹೇಳುವುದು ;

**ಶ್ರೀ ದೇವನೂರು ಪಾಂಡುರಂಗ**

ವರಂ ಪರ್ವತ ದುರ್ಗೇಷು
ಭ್ರಾಂತಂವನ ಚರೈಃಸಹ
ಮಾ ಮೂರ್ಖ ಜನ ಸಂಸರ್ಗಃ
ಸುರೇಂದ್ರ ಭವನೇಷ್ವಪಿ

(ಇಂದ್ರನ ಅಮರಾವತಿಯಾಗಿದ್ದರೂ ತಿಳಿಗೇಡಿಗಳ ಸಹವಾಸದಲ್ಲಿರುವುದಕ್ಕಿಂತ ಪಟ್ಟಡವಿಯ ಬೆಟ್ಟದಲ್ಲಿ ಬೇಡರ ಸಂಗಡ ಓಡಾಡುತ್ತಿರುವುದು ಲೇಸು.) ಮಾನವ ಅಲಸಿಯಾಗಬಾರದು. ಇಂಥವನು ಉನ್ನತಿ ಸಾಧಿಸದೆ ನಾಶವಾಗುತ್ತಾನೆ. ಮೈಗಳ್ಳತನವು ಮಾನವನ ಶರೀರದಲ್ಲಿ ಹುದುಗಿರುವ ಕಡು ವೈರಿಯು. ಇದೇ ಅವರ ಉನ್ನತಿಗೆ ಆತಂಕವನ್ನೊಡ್ಡುವುದು. ಉದ್ಯಮದಂತೆ ಏಳ್ಗೆಯನ್ನು ಸಾಧಿಸಿಕೊಡುವ ಬೇರೆ ಬಂಧುವಿಲ್ಲ. ಈತ ಎಂದಿಗೂ ದುರವಸ್ಥೆಯನ್ನು ಕಾಣುವುದಿಲ್ಲ ಎಂಬ ನೀತಿ ಮಾತುಗಳು ಸಾರ್ವಕಾಲಿಕ ಸತ್ಯವಾದವು

ಭರ್ತೃಹರಿಯಂತೆಯೇ ಸೋಮೇಶ್ವರನೂ ನೀತಿ ಪ್ರಬೋಧಕನು, ಮನುಷ್ಯ ನೈತಿಕ ಚೌಕಟ್ಟಿನಲ್ಲಿ ಬದುಕಬೇಕು. ಅಲ್ಲದೆ ರೀತಿ ನೀತಿಗಳಿಲ್ಲದ ನಡತೆ, ಅಲ್ಪಬುದ್ಧಿ, ಕೀಳು ಜನರ ಸಹವಾಸ, ಹಾಳುಮನೆ, ದುರ್ವ್ಯಸನಗಳು, ಆರಂಭಶೂರತನ, ಸಾಲದ ದೊರೆತನ ಜೀವನದಲ್ಲಿ ನಿರರ್ಥಕವಾದುವು. ಹೀಗಾಗಿ 'ನೀತಿ ತಪ್ಪಿ ನಡೆದವನು ಮಗನೇ, ಸದಾಚಾರವಿಲ್ಲದವನು ಮುನಿಯೇ' ಎಂದು ಪ್ರಶ್ನಿಸುತ್ತಾನೆ. ಮಾನವ ದುರಭ್ಯಾಸಗಳನ್ನು ಬೆಳಸಿಕೊಳ್ಳಬಾರದು, ಅದರಲ್ಲೂ ಪವತಿಯರ ಜಲ್ಲಾಟ, ಸಾಲಮಾಡುವುದು, ಮಧ್ಯಪಾನ, ಸೂಳೆಯರ ಮಾಟ, ಬಿಟ್ಟಿ ಮೃಷ್ಟಾನ್ನ ಊಟ, ಜೂಜಿನವಂಚನೆ – ಇವು ಮೊದಲು ಸವಿಯಾದರೂ ನಂತರ ಕಷ್ಟದಾಯಕ ಎನ್ನುತ್ತಾನೆ. ಎಲ್ಲ ನೈತಿಕ ಮೌಲ್ಯವನ್ನು ಮೀರುವಂತೆ ನಮ್ಮ ಮನೋನಿಯಂತ್ರಣವನ್ನು ಹದಗೆಡಿಸುವುದು ನಮ್ಮ ಮನಸ್ಸೇ. ಅದಕ್ಕಾಗಿಯೇ ದೇವರ ದಾಸಿಮಯ್ಯ 'ಮನದ ಮುಂದಣ ಆಸೆಯೇ ಮಾಯೆ' ಎಂದದ್ದು. ಡಿ. ವಿ. ಜಿ. ಯವರು ಮಾನವ ಯಾವರೀತಿಯ ಕಠಿಣ ತಪವಾಚರಿಸಿದರೂ ಮನೋ ನಿಯಂತ್ರಣ ಕಷ್ಟ ವೆನುತ್ತ

ಮನೆಯತೊರೆದೋಡಲೇಂ
ವನಗುಹೆಯ ಸಾರಲೇಂ
ಮನವನುಗ್ರ ತಪಗಳಿಂದ
ಬಂಧಿಸಲು ಏನು
ಸಾಜಗಳ ನರಸಿ ನೀನೂರೂರಲಲೆದಡೇಂ
ಮನವು ಸುಮ್ಮನೇ ಇಹುದೇ

ಎಂದು ಮನೋಚಾಂಚಲ್ಯವನ್ನು ತಿಳಿಸುತ್ತಾರೆ. ಈ ಜಗತ್ತಿನ ವಾಸನೆಗಳು ನಮ್ಮ ಹಸಿವನ್ನು ಕೆಣಕುತ್ತಿರುವಾಗ ಅವಕ್ಕೆ ಭೋಜನವ ನೀಡದಿದ್ದರೆ ಹೇಗೆ ಸಾಧ್ಯ. ಅದಕ್ಕಾಗಿ ಮನವನ್ನು, ಹಠದ ಮಗುವನ್ನು ಸಮಾಧಾನಿಸುವ ನಯದಿಂದ ಹಿಡಿತದಲ್ಲಿರಿಸಬೇಕು. ಇದಕ್ಕಾಗಿ ಆತ್ಮಶಕ್ತಿಯನ್ನು ಬೆಳೆಸಿಕೊಳ್ಳಬೇಕು ಎನ್ನುತ್ತಾರೆ. ಸ್ವಾಮಿ ವಿವೇಕಾನಂದರು 'ಶಕ್ತಿಯೇ ಜೀವನ ದುರ್ಬಲತೆಯೇ ಮರಣ' ಎನ್ನುತ್ತಾರೆ. ವಚನಕಾರರೂ ಮನೋಚಾಂಚಲ್ಯವನ್ನು ತಿಳಿಸುತ್ತಾ 'ಎನ್ನ ಚಿತ್ತವು ಅತ್ತಿಯ ಹಣ್ಣು

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5588–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

**ಸೌಲಭ್ಯಗಳು :**

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
ತಿ. ತಿ. ದೇ.

ನೋಡಯ್ಯಾ' ಎಂದೂ 'ವಿಷಯವೆಂಬ ಹಸುರನೆನ್ನ ಮುಂದೆ ಪಸರಿಸದಿರಯ್ಯಾ, ಎಂಗೂ ದೇವರಲ್ಲಿ ಮನಶುದ್ಧನನ್ನಾಗಿ ಮಾಡೆಂದೂ ಪ್ರಾರ್ಥಿಸುತ್ತಾರೆ.

ಮಾನವನ ಪ್ರಗತಿಗೆ ಅಡ್ಡವಾಗುವುದು ಜಾತಿ ಎಂಬ ಗೋಡೆ. ಕೇವಲ ಜಾತಿಯ ಮೂಲಕ ವ್ಯಕ್ತಿ ಕೀಳಾಗುತ್ತಾನೆ. ಮಾನವ ದ್ವೇಷದ ಬೀಜ ಜಾತಿ. ಈ ವಿಚಾರವನ್ನು ತಿಳಿಸುತ್ತಾ ಡಿ. ವಿ. ಜಿ. ಯವರು 'ಒಂದೆ ಗಗನವ ಕಾಣುತೊಂದೆ ನೆಲವನು ತುಳಿಯುತೊಂದೆ ಧ್ಯಾನವ ನುಣ್ಣುತೊಂದೆ ನೀ-ರ್ಗುಡಿದು ಒಂದೆ ಗಾಳಿಯನುಸಿರ್ವ ನರಜಾತಿಯೊಳಗೆಂತು ಬಂದುದೀ ವೈಷಮ್ಯ' ಎಂದು ಬೇಗುದಿಗುಳ್ಳುತ್ತಾರೆ. ಕವಿಸರ್ವಜ್ಞನೂ ಜಾತಿವಾದಿಗಳನ್ನು ತಿರಸ್ಕರಿಸುತ್ತಾನೆ:-

ಉತ್ತಮರು ಪಾಲ್ಗಡಲೊಳೆತ್ತಿಹರೆ
ಜನ್ಮವನು
ಉತ್ತಮರು ಅಧಮರೆನಬೇಡ-
ಹೊಲೆಯಿಲ್ಲ
ದುತ್ತಮರು ಎಲ್ಲ ಸರ್ವಜ್ಞಾ

ಎನ್ನುತ್ತಾನೆ. ವಚನಕಾರರು 'ಕೊಲುವನೇ ಮಾದಿಗ ಹೊಲಸುತಿಂಬುವನೆ ಹೊಲೆಯ' ಎಂದು ಹೇಳುತ್ತಾರೆ, ರಾಘವಾಂಕನು 'ಅತಿ ಹುಸಿವ ಯತಿಹೊಲೆಯ,ಹುಸಿಯದಿಹ ಯತಿ ಉನ್ನತ ಯತಿವರನು' ಎಂದು ಗುಣ-ಕರ್ಮಗಳಿಂದ ವ್ಯಕ್ತಿಯನ್ನು ಅಳೆಯುತ್ತಾರೆ.

ಮಾನವರಲ್ಲಿ ಕಾಪಟ್ಯದಿಂದ ಬೆಳೆದು ಬಂದ ಡಾಂಭಿಕ ಭಕ್ತಿಯನ್ನು ಸ್ವಾರ್ಥ ಸಾಧನೆಗಾಗಿ ವೇಷತೊಟ್ಟ ಅಷಾಢಭೂತಿಗಳನ್ನು ಸಾಧು-ಶರಣರೂ ಟೀಕಿಸುತ್ತಾರೆ. ಪುರಂದರದಾಸರು ಇಂಥವರ ಭಕ್ತಿಯನ್ನು 'ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶಭಕುತಿ ಇಲ್ಲ' ಎಂದು ನೇರವಾಗೇ ಖಂಡಿಸಿದ್ದಾರೆ. ನಾವು ಕಲ್ಪಿಸಿಕೊಂಡ ದೇವರ ಸಂಕುಚಿತ ದೃಷ್ಟಿಯನ್ನು ಅಲ್ಲಗಳೆದು ಡಿ. ವಿ. ಜಿ. ಯವರು 'ದೇವರೆನ್ನುವುದೇನು ಕಗ್ಗತ್ತಲೆಯ ಗವಿಯೇ, ನಮಗೆ ತಿಳಿಯದರ ಒಟ್ಟಿಲ್ಲ ಹೆಸರೇ' ಎನ್ನುತ್ತಾರೆ. ವಚನಕಾರರು 'ಕಲ್ಲುಮನೆಯ ಮಾಡಿ, ಕಲ್ಲುದೇವರ ಮಾಡಿ ಕಲ್ಲು ಕಲ್ಲಿನಲಿ ಕಡೆದರೆ ದೇವರೆತ್ತ ಹೋದರೋ' ಎಂದು ಡಾಂಭಿಕರನ್ನು ಪ್ರಶ್ನಿಸುತ್ತಾರೆ. ಬಸವಣ್ಣನವರು 'ಭಕ್ತಿ ಎಂಬುದ ಮಾಡಬಾರದು ಅದು ಗರಗಸದಂತೆ ಹೋಗುತ್ತ ಕುಯ್ವುದು ಬರುತ್ತ ಕುಯ್ವುದು' ಎಂದು ಹೇಳಿ ನಮ್ಮ ಆತ್ಮಶೋಧನೆಗೆ ತೊಡಗಿಸುತ್ತಾ

ಮನೆಯೊಳಗೆ ಮನೆಯೊಡೆಯ
ಇದ್ದಾನೋ ಇಲ್ಲವೋ
ಹೊಸಿಲಲ್ಲಿ ಹುಲು ಹುಟ್ಟಿ
ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯ
ಇದ್ದಾನೋ ಇಲ್ಲವೋ
ತನುವಿನಲ್ಲಿ ಹುಸಿ ತುಂಬಿ
ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲಾ

ಎಂದು ನಮ್ಮನ್ನು ಸ್ವವಿಮರ್ಶೆ ಒಳಗು ಮಾಡಿಸುತ್ತಾರೆ ಇದರಿಂದಾಗಿ ಉಪನಿಷತ್ತಿನಲ್ಲಿ ಹೇಳಿದಂತೆ 'ಆತ್ಮಾನಂ ವಿದ್ಧಿ' ನಿನ್ನನ್ನು ನೀನು ತಿಳಿ-ಎಂಬುದದಿಂದ ನಮ್ಮ ಒಳಗನ್ನು ಅರಿತರೆ ನಮ್ಮ ಮನೋವ್ಯಾಪಾರ ತಿಳಿಯುತ್ತದೆ. ಅದಕ್ಕಾಗಿಯೇ ಬಸವಣ್ಣ 'ಲೋಕದ ಡೊಂಕ ನೀವೇಕೆ ತಿದ್ದುವಿರಿ ನಿಮ್ಮ ಮನವ ಸಂತೈಸಿಕೊಳ್ಳಿ ನಿಮ್ಮ ತನುವ ಸಂತೈಸಿಕೊಳ್ಳಿ' ಎಂದು ಹೇಳಿದ್ದು. ಇಷ್ಟಲ್ಲದೆ ವಚನಕಾರರು ಸ್ವರ್ಗ-ನರಕವೆಲ್ಲವನ್ನು ಇಲ್ಲಿ ನಾವೇ ಕಾಣಬಹುದೆಂದು ಹೇಳಿ ಮಾನವೀಯವಾಗಿ ಲೋಕಹಿತವಾಗುವಂತೆ ಬದುಕಲು ಹೇಳಿದರು.

ಆಧುನಿಕ ಸಂತ ಯೋಗಿಗಳೂ ಕಾಯಕವೇ ಕೈಲಾಸವೆಂದು ಕರ್ಮಕ್ಕೆ ಮಹತ್ವ ಕೊಟ್ಟರು. ಮಾನವ ಶ್ರಮಪೂರ್ಣ ಕಾಯಕದಲ್ಲಿ ತೊಡಗಬೇಕು ಎಂದು ಜಗದಾತ್ಮಾನಂದಜೀ ಬದುಕಲು ಕಲಿಯಿರಿ ಎಂಬ ಪುಸ್ತಕದಲ್ಲಿ ವಿವರಿಸಿದರು. ಅವರು 'ಜಗತ್ತಿನ ಇತಿಹಾಸವನ್ನು ನೋಡಿದಾಗ ಮಹತ್ತನ್ನು ಸಾಧಿಸಿದವರೆಲ್ಲರೂ ಶ್ರಮದ ಮೂಲಕ ಮಾತ್ರ ಸಾಧಿಸಿದ್ದಾರೆ. ಗೆಲವು ಶ್ರಮವಿಲ್ಲದೆ ಸಿಗುವುದು ಶಬ್ದಕೋಶದಲ್ಲಿ ಮಾತ್ರ. ಉದ್ಯೋಗವೆಂದರೆ ಕೇವಲ ಹೊಟ್ಟೆ ಹೊರೆದುಕೊಳ್ಳಲು ಮಾಡುವ ದುಡಿಮೆ ಮಾತ್ರವಲ್ಲ, ಪ್ರತಿಯೊಬ್ಬನ ಅಂತರ್ಯದಲ್ಲೂ ಅಡಗಿರುವ ಆನಂದದ ಬಗ್ಗೆಯನ್ನು ಕಾಣುವ ಉಪಾಯ' ಎನ್ನುತ್ತಾರೆ. ಮಾನವ ಸ್ವೈರಾತ್ಮ ಮನೋಭಾವ, ದೈನ್ಯ, ಕೀಳರಿಮೆ, ದುಃಖ, ದೌರ್ಬಲ್ಯ ಬೆಳೆಸಿಕೊಳ್ಳಬಾರದು. ಇದು ಗೊತ್ತುಗುರಿ ಇಲ್ಲದ ಬದುಕಿನಿಂದ ನಾವು ಸಂಪಾದಿಸುವಂಥದು ಎನ್ನುತ್ತಾರೆ. ಇದಕ್ಕೆ ಆತ್ಮಶಕ್ತಿ ಮುಖ್ಯ.ಮಹತ್ವಾಕಾಂಕ್ಷೆ ಮುಖ್ಯ. ನಮ್ಮ ಬದುಕೇನೂ ಶಾಶ್ವತವಾದುದಲ್ಲ.

ಮಾನವನ ಪ್ರಯತ್ನದ ಜೊತೆ ದೈವ ಸಹಾಯವೂ ಒದಗಿ ಫಲ ಉತ್ತಮವಾಗುತ್ತವೆ. ಇಲ್ಲದಲ್ಲಿ ಕುರುಪತಿಗೆ ಎಲ್ಲ ಬಲವಿದ್ದರೂ 'ದೈವಬಲವಿಲ್ಲ ಆಜಿಗೆ' ಎಂಬಂತಾಗುತ್ತದೆ. ಹಾಗಾಗಿ ಲೇಖಕರು ಆರರವರೆಗೆ ಮನುಷ್ಯಪ್ರಯತ್ನ, ಏಳನೆಯದು ದೈವಕೃಪೆ ಎನ್ನುತ್ತಾರೆ. 'ಮಾನವ ಕಟ್ಟಿಕೊಂಡ ನಾನಾ ನಾಗರಿಕತೆಗಳು ನಾಶವಾದದ್ದು ಆಂತರಿಕ ನೈತಿಕ ಕುಸಿತದಿಂದ' ಎಂಬ ಟಾಯಾಂಬೀ ಮಾತನ್ನು ಉಲ್ಲೇಖಿಸುತ್ತಾರೆ. ಹೀಗಾಗಿ ಆಂತರಿಕ ನೈತಿಕತೆ ಇಲ್ಲದೆ ಯಾವುದೂ ಉಳಿಯಲಾರದು.

ಕೊನೆಯಲ್ಲಿ ಮಾನವ ಬದುಕಬೇಕಾದ ರೀತಿಯನ್ನು ಡಿ. ವಿ. ಜಿ. ಯವರ ಮಾತಿನಲ್ಲಿ ಹೇಳುವುದಾದರೆ,

ಹುಲ್ಲಾಗು ಬೆಟ್ಟದಡಿ ಮನೆಗೆ
ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ವಿಧಿಯ
ಮಳೆಸುರಿಯೆ
ಬೆಲ್ಲಸಕ್ಕರೆಯಾಗು ದೀನದುರ್ಬಲರಿಂಗೆ
ಎಲ್ಲರೊಳಗೊಂದಾಗು
× × ×
ಶರಣು ವೋಗು ಜೀವನ
ರಹಸ್ಯದಲಿ ಸತ್ವದಲಿ
ಶರಣು ಜೀವನವ ಸಮುವೆನಿಪ ಯತ್ನದಲಿ
ಶರಣಾಂತರಾತ್ಮ ಗಂಭೀರ
ಪ್ರಶಾಂತಿಯಲಿ
ಶರಣು ವಿಶ್ವಾತ್ಮದಲಿ

ಎಂದು ನಂಬಿ ನಡೆಯಬೇಕು. ಇಂಥ ಕೃತಿಗಳಿಂದ ಮಾನವ ಪ್ರಜ್ಞೆ ನಮ್ಮಲ್ಲಿ ಖಂಡಿತ ಮಾಡುತ್ತದೆ.



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಹೇ ಕೃಷ್ಣ ಕೃಷ್ಣ ಭಗರ್ವ ಮಮ ಚಿತ್ತಭೃಂಗಃ।
ಯಾಯಾತ್ ಕದಾಪಿ ಭಗವಚ್ಚರಣಾರವಿಂದೇ।
ದೇವಾದಿ ಪುಷ್ಪವಿಶಿಂ ಕೃಪಯಾ ತದಾನೀಂ।
ವೀಕ್ಷಸ್ವ ವಾಮನಯನೇನ ನಿಜಂ ಪದಾಬ್ಜಂ॥

# ಉದ್ಧವಗೀತೆ

ಶ್ರೀಕೃಷ್ಣ ಪರಮಾತ್ಮನು ತನ್ನ ಭಕ್ತನಾದ ಉದ್ಧವನಿಗೆ ಉಪದೇಶಮಾಡಿದ್ದಾನೆ. ಅದು ಎಲ್ಲ ಕಾಲಕ್ಕೂ, ಎಲ್ಲ ಜನರಿಗೂ ಅನ್ವಯವಾಗುವುದು. "ಹೇ! ಉದ್ಧವಾ ಇನ್ನು ಸ್ವಲ್ಪಕಾಲದಲ್ಲಿ ಸಮುದ್ರವು ಉಕ್ಕಿ ದ್ವಾರಕೆಯನ್ನು ಮುಳುಗಿಸುವುದು. ನಾನು ಯಾವಾಗ ಈ ಲೋಕವನ್ನು ಬಿಟ್ಟು ಹೊರಟು ಹೋಗುವೆನೋ ಇನ್ನೂ ನಿಶ್ಚಯ ಮಾಡಿಲ್ಲ. ಕಲಿಯು ಭೂಮಿಯನ್ನು ಆಕ್ರಮಿಸುತ್ತಿದೆ. ನೀನು ಇನ್ನುಮೇಲೆ ಇಲ್ಲಿರುವುದು ಸರಿಯಲ್ಲ. ಎಲ್ಲವನ್ನೂ ತ್ಯಾಗಮಾಡಿ, ನನ್ನಲ್ಲಿ ನೆಟ್ಟಮನಸ್ಸುಳ್ಳವನಾಗಿ, ತೀರ್ಥಯಾತ್ರಾಕ್ಷೇತ್ರ ಸಂಚಾರದಲ್ಲಿ ನಿರತನಾಗು. ವೇದ ವಿಹಿತಕರ್ಮಗಳನ್ನು ಮಾಡುತ್ತ, ಇಂದ್ರಿಯ ನಿಗ್ರಹಮಾಡಿ ಸರ್ವಭೂತ ದಯಾಪರನಾಗಿರು. ಎಲ್ಲವೂ ನನ್ನ ಸ್ವರೂಪವೆಂದು ತಿಳಿದು, ವೈರಾಗ್ಯದಿಂದ ಇದ್ದರೆ, ನೀನು ಸಂಸಾರದಿಂದ ಬಿಡುಗಡೆಹೊಂದಿ ಮೋಕ್ಷ ಪಡೆಯುವೆ" ಎಂದು ಶ್ರೀಕೃಷ್ಣನು ಹೇಳಿದನು.

ಸರ್ವಸಂಗಪರಿತ್ಯಾಗಕ್ಕೆ ಸುಲಭವಾದ ಉಪಾಯವನ್ನು ತಿಳಿಸಬೇಕೆಂದು ಉದ್ಧವನು ಶ್ರೀಕೃಷ್ಣನನ್ನು ಪ್ರಾರ್ಥಿಸುವನು.

"ಹೇ! ಉದ್ಧವಾ! ಮಾನವನಿಗೆ ಸುಶಿಕ್ಷಿತವಾದ ಅವನ ಮನಸ್ಸೇ ಗುರುವು. ಅವನು ಜನ್ಮತಾಳಿದ ಮೇಲೆ ಚಿದಚಿತ್ ಈಶ್ವರ ತತ್ತ್ವವನ್ನು ತಿಳಿಯಬೇಕು. ಪರಮಾತ್ಮೋಪಾಸನ ರೂಪವಾದ ಯೋಗವನ್ನು ಅಭ್ಯಾಸಮಾಡಬೇಕು. ಹೀಗೆ ಮಾಡಿದವನು ಮೋಕ್ಷ ಪಡೆಯುವನು. ಆದರೆ ಇಂತಹವರು ಬಹುಮಂದಿ ದೊರೆಯಲಾರರು. ಮಹಾತ್ಮರು ಇಂತಹವರನ್ನು ಧ್ಯಾನಯೋಗದಿಂದ ಕಂಡುಕೊಳ್ಳುವರು. ಸಾಮಾನ್ಯವಾಗಿ, ಮಾನವರು ಧರ್ಮಅರ್ಥಕಾಮಗಳಲ್ಲಿಯೇ ಆಸಕ್ತರಾಗಿ, ಆಯುಸ್ಸು, ಕೀರ್ತಿ, ಸಂಪತ್ತು, ಮುಂತಾದ ಐಹಿಕ ಭೋಗಗಳನ್ನು ಸಾಧಿಸುವುದಕ್ಕೆ ಪ್ರಯತ್ನಿಸುವರು" ಎಂದು ಶ್ರೀಕೃಷ್ಣನು ತಿಳಿಸಿದನು.

"ಜೀವನು ಪ್ರಕೃತಿಗುಣ ಪರಿಣಾಮರೂಪನು. ಶಬ್ದಾದಿ ಗುಣಗಳನ್ನು ಅನುಭವಿಸತಕ್ಕವನು. ಹೀಗೆ ಜೀವನು ಸತ್ತ್ವಾದಿಗುಣಗಳಲ್ಲಿ ಮರೆಸಲ್ಪಟ್ಟಿರುವಾಗ ಮುಕ್ತನಾಗುವುದು ಹೇಗೆ? ನಿತ್ಯಮುಕ್ತನಾದ ಈಶ್ವರನು ತನ್ನ ಅವಿದ್ಯೆಯಿಂದ ಜೀವನನ್ನು ಬದ್ಧನನ್ನಾಗಿ ಇಟ್ಟಿಲ್ಲವೇ?" ಎಂದು ಉದ್ಧವನು ಪ್ರಶ್ನೆಮಾಡುವನು.

"ಪ್ರಕೃತಿ ಗುಣಗಳಿಂದ ಮತ್ತು ಕರ್ಮಗಳಿಂದ ನನ್ನನ್ನು ನಿತ್ಯ, ಮುಕ್ತನೆಂದು ಹೇಳುವುದು ಬರೀ ಭ್ರಮೆ. ಇದು ವಾಸ್ತವವಲ್ಲ. ಮಾಯೆಯು ನನ್ನ ನಿಯಮಕ್ಕೆ ಒಳಪಟ್ಟಿದೆ. ಇದರಿಂದಲೇ ಜೀವನಿಗೆ ಶೋಕ, ಮೋಹ, ಸುಖದುಃಖಾದಿಗಳು, ಮತ್ತು ದೇಹಪ್ರಾಪ್ತಿ ಉಂಟಾಗುವುದು. ವಿದ್ಯೆ, ಅವಿದ್ಯೆ—ಎರಡೂ ನನಗೆ ಶರೀರವಿದ್ದ ಹಾಗೆ. ವಿದ್ಯೆ ಎಂದರೆ ನನ್ನ ಉಪಾಸನೆ, ಅವಿದ್ಯೆ ಎಂದರೆ ನನ್ನ ಸ್ವರೂಪವನ್ನು ತಿಳಿಯದ ಅಜ್ಞತೆ. ಇದು ನನ್ನ ಅಂಶರೂಪವಾದ ಜೀವನಿಗೂ ಅವಿದ್ಯೆಯಿಂದ ಬರುವುದು, ಆದರೆ ವಿದ್ಯೆಯಿಂದ ಮೋಕ್ಷ ದೊರೆಯುವುದು" ಎಂದು ಶ್ರೀಕೃಷ್ಣನ ತಿಳಿಸಿದನು.

"ಹೇ! ಉದ್ಧವಾ! ಹಾಲಿಲ್ಲದ ಪಶು, ದುರ್ಮಾರ್ಗ ಪ್ರವರ್ತಕನಾದ ಪುತ್ರ, ದುಃಖ ಹೇತುವಾದ ದೇಹ, ದುಷ್ಟಳಾದ ಪತ್ನಿ, ಸತ್ಪಾತ್ರದಲ್ಲಿ ಮಾಡದ ದಾನ—ಇವನ್ನೆಲ್ಲ ಪೋಷಿಸಿದವನಿಗೆ ದುಃಖ ಪರಂಪರೆ ತಪ್ಪದು. ವಿವೇಕಿಯಾದವನು ನನ್ನ ವಿಚಾರ ವಿನಹ ಬೇರೆ ಮಾತನಾಡುವುದಿಲ್ಲ. ತನ್ನ ಎಲ್ಲ ಕರ್ಮಗಳನ್ನು ನನ್ನಲ್ಲಿ ಅರ್ಪಿಸುವನು. ನನ್ನ ವಿಷಯವಾದ ಕಥೆಗಳನ್ನು ಕೇಳುವನು. ನನ್ನನ್ನು ಕೀರ್ತನೆಮಾಡಿ ಸ್ಮರಿಸುವನು. ಹೇ! ಉದ್ಧವಾ! ಯಾರು ನನ್ನನ್ನು ಪ್ರಾಪಕನೆಂದೂ, ಪ್ರಾಪ್ಯನೆಂದೂ, ರಕ್ಷಕನೆಂದೂ ದೃಢವಾಗಿ ನಂಬಿ ನನ್ನಲ್ಲಿ ಅನನ್ಯಭಾವದಿಂದ ಶರಣಾಗತಿ ಮಾಡುವನೋ ಅಂತಹವನಿಗೆ ನಾನು ಎಲ್ಲ ಭಯವನ್ನೂ ಹೋಗಲಾಡಿಸಿ, ನನ್ನ ಸಾನ್ನಿಧ್ಯ ದೊರೆಯುವಂತೆ ಮಾಡುವೆನು" ಎಂದು ಶ್ರೀಕೃಷ್ಣನು ಹೇಳಿದನು.

"ಹೇ! ಪ್ರಭೂ! ಕೃಷ್ಣಪರಮಾತ್ಮಾ!! ಮೋಕ್ಷಾರ್ಥಿಯಾದವನು ಸದಾ ನಿನ್ನನ್ನು ಧ್ಯಾನಿಸುತ್ತಿರಬೇಕೆಂದು ತಿಳಿಸಿದೆ. ಆದರೆ ಅವನು ಹೇಗೆ, ಎಲ್ಲಿ, ಯಾವ ರೂಪವನ್ನು ಕುರಿತು ಸ್ಮರಿಸುತ್ತಿರಬೇಕು" ಎಂದು ಉದ್ಧವನು ಕೇಳಿದನು.

"ಹಳ್ಳತಿಟ್ಟು ಇಲ್ಲದ ಸಮವಾದ ಸ್ಥಳವನ್ನು ಆರಿಸಿ ದರ್ಭೆ, ಕೃಷ್ಣಾಜಿನ, ಅಥವ ಮಣೆ ಮುಂತಾದ ಆಸನವನ್ನು ರಚಿಸಿ, ಪದ್ಮಾಸನ ಕ್ರಮದಿಂದ ಮೈಯನ್ನು ನೆಟ್ಟಗೆ ನಿಲ್ಲಿಸಿ, ತೊಡೆಯಮೇಲೆ ಕೈಯಿಟ್ಟು, ದೃಷ್ಟಿಯನ್ನು ಮೂಗಿನ ತುದಿಯಲ್ಲಿ ಕೇಂದ್ರೀಕರಿಸಬೇಕು. ಪೂರಕ, ಕುಂಭಕ, ರೇಚಕಗಳಿಂದ ಪ್ರಾಣಾಯಾಮ ಮಾಡಬೇಕು. ಪ್ರಾಣಾಯಾಮದಿಂದ ಮನಸ್ಸು ಶುದ್ಧವಾಗುವುದು. ಓಂಕಾರದ ಪ್ರಾಣಾಯಾಮದಿಂದ ಹೃದಯದಲ್ಲಿ ನಾನು ಅಂತರ್ಗತನಾಗಿರುವೆನೆಂದು ಭಾವಿಸಬೇಕು. ಧ್ಯಾನಕ್ಕೆ ವಿಷಯವಾದ ನನ್ನನ್ನು ಅವನು ಹೀಗೆ ಭಾವಿಸಬೇಕು. ಶ್ಯಾಮಲವಾದ ಮೈ. ಸುಂದರವಾದ ಮುಖ. ನೀಳವಾದ ನಾಲ್ಕುಭುಜಗಳು, ಸೊಗಸಾದ ಮತ್ತು ನಯವಾದ ಕೂದಲು, ನುಣುಪಾದ ಕಪೋಲಗಳು. ಕಿವಿಯಲ್ಲಿ ಕುಂಡಲಗಳು, ಶ್ರೀವತ್ಸವೆಂಬ ಮಚ್ಚೆ, ಶಂಖಚಕ್ರಗದಾಪದ್ಮಗಳಿಂದ ಕೂಡಿದ ನಾಲ್ಕುಭುಜಗಳು, ಕಾಂತಿಯಿಂದ ಕೂಡಿದ ಕಿರೀಟ, ಕೇಯೂರ ಕಟಕ ಕಟಿಸೂತ್ರಾದಿ ಆಭರಣಯುಕ್ತವಾದ ಸುಂದರಮೂರ್ತಿ, ಪ್ರಸನ್ನತೆಯಿಂದ ಕೂಡಿದ ನಗುಮುಖ, ಇಂತಹ ಸುಂದರ ದಿವ್ಯಮಂಗಳ ವಿಗ್ರಹವನ್ನು ಮನಸ್ಸಿಗೆ ತಂದುಕೊಂಡು, ಸರ್ವನಿಯಾಮಕನಾದ ನನ್ನನ್ನು ಧ್ಯಾನಿಸುತ್ತ ಇರುವವನಿಗೆ ಯಾವ ವಿಪತ್ತೂ ಬರುವುದಿಲ್ಲ. ಇಂತಹ ಭಕ್ತನಿಗೆ ತ್ರಿಕಾಲಜ್ಞಾನವುಂಟಾಗುವುದು. ಶಾಂತ ಚಿತ್ತ ದೊರೆಯುವುದು. ಕಾರ್ಯಸಿದ್ಧಿಯಾಗುವುದು" ಎಂದು ಶ್ರೀಕೃಷ್ಣನು ಹೇಳಿದನು.

ಅನಂತರ ಉದ್ಧವನು ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳುವನು. "ಹೇ ಪ್ರಭೂ! ನೀನು ಆದಿ ಅಂತ್ಯರಹಿತನು. ಸಕಲ ಜೀವಿಗಳಿಗೆ ಆದಿಭೂತನು. ಜ್ಞಾನಿಗಳು ನಿನ್ನ ಸ್ವರೂಪವನ್ನು ಸಮಸ್ತಭೂತಗಳಲ್ಲಿ ಕಾಣುವರು. ಹಾಗೆಯೇ ಉಪಾಸಿಸುವರು. ಯಾವ ಯಾವ ವಸ್ತುಗಳಲ್ಲಿ ವಿಭೂತಿ ವಿಶಿಷ್ಟನಾಗಿರುವೆ? ಹೇ! ಅಚ್ಯುತಾ ಸ್ವರ್ಗಮರ್ತ್ಯ ಪಾತಾಳಗಳಲ್ಲಿ ಶ್ರೇಷ್ಠವಾದ ನಿನ್ನ ವಿಭೂತಿಗಳು ಯಾವುವು? ಎಂಬ ಅಂಶವನ್ನು ತಿಳಿಸು" ಎಂದು ಉದ್ಧವನು ಬೇಡಿದನು.

"ಹೇ! ಉದ್ಧವಾ! ಹಿಂದೆ ಅರ್ಜುನನಿಗೆ ಇದೇ ವಿಷಯವನ್ನು ತಿಳಿಸಿದ್ದೆ. ಅದನ್ನೇ ನಿನಗೆ ಈಗ ಹೇಳುವೆನು ಕೇಳು. ನಾನು ಸತ್ತ್ವಾದಿ ಗುಣವುಳ್ಳವನು. ನಾನೇ ಕಾಲನು, ಮಹತ್ವಗುಣವುಳ್ಳವನೂ, ಅತಿ ಸೂಕ್ಷ್ಮಜೀವನೂ ನಾನೇ ದೇವತೆಗಳಲ್ಲಿ ಹಿರಣ್ಯಗರ್ಭನೂ, ಮಂತ್ರಗಳಲ್ಲಿ

ಶ್ರೀ ಡಿ. ಕೃಷ್ಣಯ್ಯಂಗಾರ್

ಪ್ರಣವವೂ ನಾನೇ, ದೇವತೆಗಳಲ್ಲಿ ಇಂದ್ರನೂ, ಅಷ್ಟವಸುಗಳಲ್ಲಿ ಹವ್ಯವಾಹನನೂ, ದ್ವಾದಶಾದಿತ್ಯರಲ್ಲಿ ವಿಷ್ಣುವೂ, ಬ್ರಹ್ಮರ್ಷಿಗಳಲ್ಲಿ ಭೃಗುವೂ, ರಾಜರ್ಷಿಗಳಲ್ಲಿ ಮನುವೂ, ದೇವರ್ಷಿಗಳಲ್ಲಿ ನಾರದನೂ, ಧೇನುಗಳಲ್ಲಿ ಕಾಮಧೇನುವೂ, ಪಕ್ಷಿಗಳಲ್ಲಿ ಗರುಡನೂ, ಪ್ರಜಾಪತಿಗಳಲ್ಲಿ ದಕ್ಷನೂ, ಪಿತೃಗಳಲ್ಲಿ ಅರ್ಯಮನೂ ನಾನೇ ಆಗಿರುವೆನು. ಉದ್ಧವಾ! ಹಾಗೆಯೇ ಯಕ್ಷರಾಕ್ಷಸರಲ್ಲಿ ಕುಬೇರನೂ, ಆನೆಗಳಲ್ಲಿ ಐರಾವತವೂ, ಕುದುರೆಗಳಲ್ಲಿ ಉಚ್ಚೈಶ್ರವಸ್ಸೂ, ಧಾತುಗಳಲ್ಲಿ ಬಂಗಾರವೂ, ದಂಡಿಸುವವರಲ್ಲಿ ಯಮನೂ, ಸರ್ಪಗಳಲ್ಲಿ ವಾಸುಕಿಯೂ, ನಾಗಶ್ರೇಷ್ಠರಲ್ಲಿ ಆದಿಶೇಷನೂ, ಮೃಗಗಳಲ್ಲಿ ಸಿಂಹವೂ, ತೀರ್ಥಗಳಲ್ಲಿ ಗಂಗೆಯೂ ನಾನೇ ಆಗಿರುವೆನು.

"ಇಷ್ಟೇ ಅಲ್ಲದೆ ಪುರೋಹಿತರಲ್ಲಿ ವಸಿಷ್ಠನೂ, ವೇದನಿಷ್ಠರಲ್ಲಿ ಬೃಹಸ್ಪತಿಯೂ, ಸೇನಾಪತಿಗಳಲ್ಲಿ ಷಣ್ಮುಖನೂ, ಯಜ್ಞಗಳಲ್ಲಿ ಬ್ರಹ್ಮಯಜ್ಞವೂ, ವೃಕ್ಷಗಳಲ್ಲಿ ಅಶ್ವತ್ಥವೂ, ಆಯುಧಗಳಲ್ಲಿ ಧನಸ್ಸೂ ನಾನೇ ಆಗಿರುವೆನು. ಉದ್ಧವಾ! ಎಲ್ಲೆಲ್ಲಿ ಉತ್ತಮಗುಣಗಳು ನೆಲಸಿರುವುವೋ, ಎಲ್ಲೆಲ್ಲಿ ಶ್ರೇಷ್ಠವಸ್ತುಗಳಿರುವುವೋ ಅವುಗಳೆಲ್ಲಾ ನನ್ನ ವಿಭೂತಿ ವಿಶಿಷ್ಟವೆಂದು ತಿಳಿ." ಎಂದನು ಶ್ರೀ ಕೃಷ್ಣ.

"ಹೇ! ದೇವಕೀನಂದನಾ! ಮೋಕ್ಷಸಾಧನಗೆ ಯಮ ನಿಯಮ ಶಮಾದಿಗಳು ಕಾರಣ ಎಂದು ತಿಳಿಸಿದೆ. ಅವುಗಳ ಸ್ವರೂಪ ಎಂತಹುದು? ಯಮ, ನಿಯಮ ಎಂದರೇನು? ಶಮಾದಿಗಳು ಯಾವುವು? ಸನ್ಮಾರ್ಗ, ಸ್ವರ್ಗ ನರಕಗಳ ಸ್ವರೂಪ ಹೇಗಿದೆ? ಧನಿಕನಾರು? ದರಿದ್ರನಾರು? ಕೃಪಣನಾರು? ಭಕ್ತಿಸಾಧನಗಳು ಯಾವುವು?"– ಎಲ್ಲವನ್ನೂ ತಿಳಿಸುವಂತೆ ಉದ್ಧವನು ಶ್ರೀಕೃಷ್ಣನನ್ನು ಬೇಡಿದನು.

"ಇತರರಿಗೆ ದ್ರೋಹಮಾಡದೆ, ಎಲ್ಲರಿಗೂ ಹಿತಮಾಡುವುದು, ಪರರ ಸ್ವತ್ತು ಅಪಹರಿಸದಿರುವುದು, ಯಾವುದರಲ್ಲಿಯೂ ಅತಿಆಸೆ ಹೊಂದದಿರುವುದು, ನಿಷಿದ್ಧಕಾರ್ಯ ಮಾಡದಿರುವುದು, ವೇದಶಾಸ್ತ್ರಗಳಲ್ಲಿ ನಂಬಿಕೆ, ಪರಸ್ತ್ರೀವರ್ಜನೆ, ಸ್ಥಿರಮನಸ್ಸು, ತಾಳ್ಮೆ, ಪಾಪಭೀತಿ– ಇತ್ಯಾದಿಗಳು ಯಮಗಳು.

"ಅಂತಶ್ಶುದ್ಧಿ, ಜಪ, ತಪಸ್ಸು, ಹೋಮ, ಅತಿಥಿಸತ್ಕಾರ, ದೇವತಾಪೂಜೆ, ತೀರ್ಥಯಾತ್ರೆ, ಪರೋಪಕಾರ, ಆಚಾರ್ಯಸೇವೆ – ಮುಂತಾದುವು ನಿಯಮಗಳು. ಬುದ್ಧಿಯನ್ನು ಪರಮಾತ್ಮಧ್ಯಾನದಲ್ಲಿ ನಿಲ್ಲಿಸುವುದು ಶಮ. ಇಂದ್ರಿಯಗಳನ್ನು ಅಡಗಿಸಿಡುವುದ., ಮತ್ತು ದುಃಖವನ್ನು ಸಹಿಸುವುದು ತಿತಿಕ್ಷೆ. ಕಾಮವನ್ನು ತಡೆಹಿಡಿಯುವುದು ಧೃತಿ. ಭೂತದ್ರೋಹ ಮಾಡದಿರುವುದು ದಾನ, ಭೋಗಾಪೇಕ್ಷೆ ಮಾಡದಿರುವುದು ತಪಸ್ಸು, ಎಲ್ಲವನ್ನೂ ಬ್ರಹ್ಮಾತ್ಮಕವೆಂದು ತಿಳಿಯುವುದು ಸತ್ಯ. ಕರ್ಮಕ್ಕೆ ತಾನು ಕರ್ತೃ ಅಲ್ಲ ಎಂದು ತಿಳಿಯುವುದು ಶೌಚ. ಕರ್ಮಫಲ ತ್ಯಜಿಸುವುದು ತ್ಯಾಗ. ಸತ್ತ್ವಗುಣ ಅಭಿವೃದ್ಧಿಪಡಿಸುವುದು ಸ್ವರ್ಗ. ತಮೋಗುಣ ಅಭಿವೃದ್ಧಿಪಡಿಸುವುದು ನರಕ. ಗುಣಾಢ್ಯನು ಧನಿಕನು.

"ತುಚ್ಛ ಭಾವನೆಯುಳ್ಳವನು ದರಿದ್ರನು. ಇಂದ್ರಿಯಗಳನ್ನು ಜಯಿಸಲಾರದವನು ಕೃಪಣನು. ಶಬ್ದಾದಿ ವಿಷಯಗಳಿಗೆ ಮನಸ್ಸು ಹೋಗದಂತೆ ನಿಗ್ರಹಿಸುವವನು ಪ್ರಭುವು. ಇವೆಲ್ಲ ಭಕ್ತಿಸಾಧನಗಳು" ಎಂದು ಶ್ರೀಕೃಷ್ಣನು ತಿಳಿಸಿದನು.

"ಹೇ! ವಾಸುದೇವಾ! ಇಂದ್ರಿಯಗಳನ್ನು ಜಯಿಸುವುದು ಕಷ್ಟ. ಯೋಗವಿದ್ಯೆಯ ಅಭ್ಯಾಸ ಇನ್ನೂ ಕಷ್ಟ. ಅನಾಯಾಸವಾಗಿ ಮೋಕ್ಷ ಸಂಪಾದಿಸುವುದಕ್ಕೆ ಏನಾದರೂ ಉಪಾಯ ಇದ್ದರೆ ತಿಳಿಸಬೇಕು" ಎಂದು ಉದ್ಧವನು ಪ್ರಾರ್ಥಿಸಿದನು.

"ಹೇ! ಉದ್ಧವಾ! ಬಹು ಸಾರವತ್ತಾದ ಪ್ರಶ್ನೆಯನ್ನು ಕೇಳಿದೆ. ನನ್ನಲ್ಲಿ ಭಕ್ತಿಸಾಧನೆ ಮಾಡಬೇಕೆಂದಿರುವವನು, ವರ್ಣಾಶ್ರಮಧರ್ಮಗಳು ನನ್ನ ಆರಾಧನೆ ಎಂದು ತಿಳಿಯಬೇಕು. ಸರ್ವವಿಧ ಮನೋಲ್ಲಾಸಗಳನ್ನು ನನ್ನಲ್ಲಿ ಅರ್ಪಿಸಬೇಕು. ಪುಣ್ಯಸ್ಥಳಗಳನ್ನು ಸಂದರ್ಶನಮಾಡಿ, ನನ್ನ ಭಕ್ತರ ಸಂಗಮಾಡಬೇಕು. ಯಾವ ಫಲವನ್ನೂ ಅಪೇಕ್ಷಿಸ ಧರ್ಮಾಚರಣೆ ಮಾಡಬೇಕು. ನಿಷ್ಪ್ರಯೋಜನ ಎಂದು ತೋರಿಬರುವ ವ್ಯಾಪಾರಗಳನ್ನು ನನ್ನನ್ನೇ ಕುರಿತು ಮಾಡಿದ ಪಕ್ಷದಲ್ಲಿ ಅವೂ ಕೂಡ ಕಾಲಾನುಕ್ರಮದಲ್ಲಿ ಫಲ ಕೊಡುತ್ತವು.

"ಹೇ! ಉದ್ಧವಾ! ಕಂಸನನ್ನು ನನ್ನ ಮೇಲಿನ ಭಯದಿಂದಲೂ, ಗೋಪಸ್ತ್ರೀಯರು ಮೋಹದಿಂದಲೂ, ಶಿಶುಪಾಲನು ದ್ವೇಷದಿಂದಲೂ, ಉತ್ತಮ ಫಲ ಪಡೆಯಲಿಲ್ಲವೇ? ಹೇ! ಉದ್ಧವಾ! ನಿನ್ನಂತಹ ಭಕ್ತರಿಗೆ, ಸಕಲ ಪುರುಷಾರ್ಥವೂ ನಾನೇ. ಅನನ್ಯ ಶರಣಾದವರನ್ನು ಅನುಗ್ರಹಿಸುವುದು ನನ್ನ ಸಂಕಲ್ಪ. ಯಾರು ತನ್ನ ರಕ್ಷಣಾಭಾರವನ್ನು ನನ್ನಮೇಲೆ ಹೊರಿಸಿ, ತಾನು ಮಾಡುವ ಕಾರ್ಯಗಳೆಲ್ಲ ನನ್ನ ಆರಾಧನೆಗಾಗಿ ಎಂದು ಭಾವಿಸುತ್ತ, ಕಾಮ್ಯಕರ್ಮಗಳನ್ನು ತ್ಯಜಿಸುವನೋ ಅಂತಹವನು, ನನ್ನ ಪೂರ್ಣ ಅನುಗ್ರಹಕ್ಕೆ ಪಾತ್ರನಾಗಿ ಮೋಕ್ಷಪಡೆಯುವನು" ಎಂದು ಶ್ರೀಕೃಷ್ಣನು ಉಪದೇಶ ಮಾಡಿದನು.

ಅನಂತರ ಉದ್ಧವನು, ಪರಮಾತ್ಮಸ್ವರೂಪನಾದ ಕೃಷ್ಣನ ಮುಂದೆ ಕೈಮುಗಿದು ನಿಂತು, "ಹೇ! ಪ್ರಭೋ! ವಾಸುದೇವಾ! ನನ್ನ ಮೋಹ ಹೋಯಿತು. ಪರಮ ಕೃಪಾಳುವಾದ ನೀನು ನಿನ ಭಕ್ತನಾದ ನನಗೆ ಕೃಪೆಮಾಡಿದೆ. ಜ್ಞಾನದಾನ ಮಾಡಿದೆ. ಹೇ! ಯೋಗೀಶ್ವರಾ! ಎಂದೆಂದಿಗೂ ಭಕ್ತಿಯು ನನ್ನಲ್ಲಿ ನೆಲಸುವಂತೆ ಅನುಗ್ರಹಿಸು" ಎಂದು ಉದ್ಧವನು ಹೇಳಿದನು. ಅನಂತರ ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ತಪೋನಿರತನಾಗಿ ಕಾಲಾನುಕ್ರಮದಲ್ಲಿ ಮೋಕ್ಷ ಪಡೆದನು. ★

## ಗೃಹಲಕ್ಷ್ಮಿ

# ಕುಮಾರಿ ಸಂಧ್ಯಾ

ಬಹಳ ಹಿಂದಿನ ಕಾಲದ ಮಾತು. ಕಮಲಾಸನದಲ್ಲಿ ಪೀಠಸ್ಥನಾಗಿದ್ದ ಲೋಕಪಿತನಾದ ಬ್ರಹ್ಮನು ಭಗವಂತನ ಧ್ಯಾನ ಮಾಡುತ್ತಲಿದ್ದಾಗ ಸೃಷ್ಟಿಯ ಸಂಕಲ್ಪವೊಂದು ರೂಪುಗೊಂಡಿತು. ಆಗ ಆತನ ಮನಸ್ಸಿನಲ್ಲಿ ಓರ್ವ ತ್ರಿಪುರ ಸುಂದರಿ ಷೋಡಶಿಯು ಪ್ರಕಟವಾದಳು. ಸ್ವಲ್ಪ ಧ್ಯಾನ ಮಾತ್ರದಿಂದಲೆ ಬ್ರಹ್ಮ ಮಾನಸ ಪುತ್ರಿಯಾಗಿ ಸೃಷ್ಟಿಯಾದ ಇವಳ ಹೆಸರು ಸಂಧ್ಯಾ ಎಂದಾಯಿತು.

ಉತ್ತಮ ಸೃಷ್ಟಿಯ ಕನ್ಯೆಯಾದುದರಿಂದ ಸಂಧ್ಯಾಳ ಸಂಪೂರ್ಣಗಮನವು ದಾರ್ಶನಿಕ, ತಾತ್ತ್ವಿಕ ಹಿನ್ನೆಲೆಯ ಕಡೆಗಿತ್ತು. ಆದ್ದರಿಂದ ತಪಸ್ಸು ಮಾಡಲು ಚಂದ್ರಭಾಗಾ ಪರ್ವತವನ್ನೇರಿದಳು. ಆದರೆ ತಪಸ್ಸು ಮಾಡುವ ರೀತಿ ಗೊತ್ತಿರಲಿಲ್ಲ. ಯಾರಾದರೂ ಮಹಾತ್ಮರು ದರ್ಶನ ನೀಡಿ ತಪಸ್ಸು ಮಾಡುವ ರೀತಿಯನ್ನು ತೋರಿಸುವರೇನೋ, ಮಾರ್ಗದರ್ಶನ ನೀಡುವರೇನೋ ಎಂದು ನಿರೀಕ್ಷಿಸ ತೊಡಗಿದಳು. ಇದಕ್ಕಾಗಿ ಬೃಹಲ್ಲೋಹಿತವೆನ್ನುವ ಸರೋವರದ ಬಳಿ ಸುತ್ತಾಡ ತೊಡಗಿದಳು ಪರಮಾತ್ಮನ ಕೃಪೆಯಿಂದಲೊ ಏನೊ ಎನ್ನುವಂತೆ ವಸಿಷ್ಠ ಮಹರ್ಷಿಗಳು ಅಲ್ಲಿಗೆ ಬಂದರು.

ಸಂಧ್ಯಾಳು ಅಲ್ಲಿ ಒಂಟಿಯಾಗಿರುವುದನ್ನು ನೋಡಿ, ಅವರು ಕೇಳಿದರು "ಭದ್ರೆ, ನೀನ್ಯಾರು? ಯಾರು ಮಗಳು? ಈ ಭಯಾನಕ ಅರಣ್ಯದಲ್ಲಿ ಓರ್ವಳೆ ಏಕೆ ಸುತ್ತಾಡುತ್ತಿರುವೆ? ಗುಟ್ಟಾಗಿರುವ ವಿಚಾರವಿಲ್ಲದಿದ್ದರೆ, ನಿನ್ನ ಉದ್ದೇಶ್ಯವೇನೆಂಬುದನ್ನು ತಿಳಿಸು......"

ಆಗ ಸಂಧ್ಯಾಳು ತನ್ನ ಮನಸ್ಸಿನಲ್ಲಿನ ವಿಷಯವನ್ನು ತಿಳಿಸಿದಳು. ಇದರಿಂದ ವಸಿಷ್ಠರ ಮನ ಕರಗಿತು. ಆಕೆಗೆ ದ್ವಾದಶಾಕ್ಷರ ಮಂತ್ರವನ್ನು ಉಪದೇಶಿಸಿ, ತಪಸ್ಸು ಮಾಡುವ ರೀತಿಯನ್ನು, ನಿಯಮಗಳನ್ನು ತಿಳಿಯ ಹೇಳಿದರು:

"ಪರಮಾತ್ಮನ ದರ್ಶನ ಆಗುವರೆಗೂ ಈ ನಿಯಮಗಳನ್ನು ಪಾಲಿಸುತ್ತಿರಬೇಕು. ವೃಕ್ಷಗಳ ವಲ್ಕಲಗಳನ್ನು ಧರಿಸಿ, ನೆಲದ ಮೇಲೆ ಮಲಗಬೇಕು. ಮೌನಿಯಾಗಿ ಸದಾ ಪರಮಾತ್ಮನ ಧ್ಯಾನ ಮಾಡುವುದೇ ಅಲ್ಲದೆ, ತನು ಮನಗಳನ್ನು ಅದಕ್ಕಾಗಿ ಅರ್ಪಿಸಬೇಕು. ಇದರಿಂದ ಪ್ರಸನ್ನನಾಗುವ ಮಹಾವಿಷ್ಣುವು ಖಂಡಿತವಾಗಿಯೂ ನಿನ್ನ ಮನೋಭಿಲಾಷೆಯನ್ನು ಪೂರ್ಣಮಾಡುವನು......"

ಹೀಗೆ ಉಪದೇಶ ಮಾಡಿ ವಸಿಷ್ಠರು ಹೊರಟು ಹೋದರು. ಇದರಿಂದ ಸಂಧ್ಯಾಳಿಗೆ ತುಂಬಾ ಸಂತೋಷವಾಗಿತ್ತು. ಅತ್ಯಂತ ಆನಂದೋತ್ಸಾಹಗಳಿಂದ ಭಗವಂತನ ಪೂಜೆಯಲ್ಲಿ ನಿರತಳಾದಳು. ವಸಿಷ್ಠರು ತಿಳಿಸಿದ ನಿಯಮಗಳನ್ನು ಚಾ-ಚೂ ತಪ್ಪದೆ ಪಾಲಿಸ ತೊಡಗಿದಳು. ಈ ರೀತಿಯಲ್ಲಿ ನಾಲ್ಕು ಯುಗಗಳವರೆಗೂ ತಪಸ್ಸು ಮಾಡಿದಳು. ಆಕೆಯ ವ್ರತ ನಿಯಮ ಹಾಗೂ ಸುದೃಢ ನಿಯಮಗಳನ್ನು ನೋಡಿ ಎಲ್ಲರಿಗೂ ಬಹಳ ಆಶ್ಚರ್ಯವಾಯಿತು. ಇದರಿಂದ ಸಂತುಷ್ಟನಾದ ಮಹಾವಿಷ್ಣುವು ಅವಳ ಇಂಗಿತದಂತೆ ಮನೋಹರ ರೂಪವನ್ನು ಧರಿಸಿ ಪ್ರತ್ಯಕ್ಷನಾದನು. ಗರುಡಾರೂಢನಾದ ತನ್ನ ಪ್ರಭುವಿನ ಮನೋಹರ ರೂಪವನ್ನು ನೋಡಿ ಸಂಧ್ಯಾಳು ಆನಂದತುಂದಿಲಳಾದಳು. ಜಡಳಂತಾಗಿ ಏನು ಮಾಡಲು ತೋಚದೆ ಸ್ತಬ್ಧಳಾದಳು.........ನಂತರ ಜಾಗೃತಗೊಂಡು ಪರಮಾತ್ಮನನ್ನು ಸ್ತುತಿಸಬೇಕೆಂದು ಕೊಂಡಳು. ಆದರೆ ಅದೂ ಸಾಧ್ಯವಾಗಲಿಲ್ಲ. ಭಗವಂತನು ಅವಳ ಮನಸ್ಸನ್ನು ಅರ್ಥಮಾಡಿಕೊಂಡು ಅವಳಿಗೆ ದಿವ್ಯಜ್ಞಾನ, ದಿವ್ಯದೃಷ್ಟಿ ಹಾಗೂ ದಿವ್ಯವಾಣಿಯನ್ನು ಅನುಗ್ರಹಿಸಿದನು.

ಇದರಿಂದ ಪ್ರಭಾವಿತಳಾದ ಸಂಧ್ಯಾಳು ಉತ್ಸಾಹ, ಸಂತಸಗಳಿಂದ ಪರಮಾತ್ಮನನ್ನು ಸ್ತುತಿಸತೊಡಗಿದಳು. ಅವಳು ಹೇಳುತ್ತಿದ್ದ ಪ್ರತಿ ಸಾಲಿನಲ್ಲಿಯೂ ಪ್ರೇಮ, ಭಕ್ತಿಗಳು ಹೊರ ಹೊಮ್ಮುತ್ತಿದ್ದವು. ಜ್ಞಾನಪೂರ್ಣ ಸ್ತುತಿಯನ್ನು ಮಾಡುತ್ತಾ ಅವಳು ಪರಮಾತ್ಮನ ಚರಣಗಳಲ್ಲಿ ಉರುಳಿದಳು. ತಪಸ್ಸು ಮಾಡಿ, ಮಾಡಿ ಅವಳ ಶರೀರವು ತುಂಬಾ ದುರ್ಬಲವಾಗಿತ್ತು. ಇದನ್ನು ನೋಡಿ ಪರಮಾತ್ಮನ ಹೃದಯವು ತುಂಬಿ ಬಂದಿತು. ತನ್ನ ಅಮೃತ ವರ್ಷಿಣೀ ದೃಷ್ಟಿಯಿಂದ ನೋಡಿ ಅವಳನ್ನು ಮೊದಲಿನಂತೆ ದಷ್ಟಪುಷ್ಟಳನ್ನಾಗಿ ಪರಿವರ್ತಿಸಿದ. ಸ್ನೇಹಪೂರಿತ ಮಧುರ ದನಿಯಲ್ಲಿ ಹೇಳಿದ,

"ಭದ್ರೆ! ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನಿನ್ನ ಇಚ್ಛಾನುಸಾರ ವರವನ್ನು ಕೇಳು"

'ರಘುಸುತ'



"ಭಗವನ್! ವರನೀಡಿ ನನ್ನನ್ನು ಅನುಗ್ರಹಿಸುವಂತಿದ್ದರೆ ನನಗೆ ಈ ಮೊದಲ ವರವನ್ನು ನೀಡು. ಪ್ರಪಂಚದಲ್ಲಿ ಜನ್ಮ ತಳೆದ ಪ್ರತಿಯೊಂದು ಮಾನವ ಪ್ರಾಣಿಯ ವರ್ಗದಲ್ಲೂ ಕಾಮವು ತಲೆ ಎತ್ತದಿರಲಿ"

"ತಥಾಸ್ತು.........ಎರಡನೇವರ........."

"ನನ್ನ ಪತಿವ್ರತಾ ಧರ್ಮವು ಯಾವುದೇ ಸನ್ನಿವೇಶ, ಸಂದರ್ಭದಲ್ಲಿ ಛಿದ್ರವಾಗದಿರಲಿ........."

"ನೀಡಿರುವೆನು.........ಮೂರನೆ ವರವನ್ನು ಕೇಳಿಕೊ........."

"ಭಗವತ್ ಸ್ವರೂಪನಾದ ಪತಿಯ ವಿನಹ ನನ್ನ ಮೇಲೆ ಬೇರೆಯವರ ಸಕಾಮ ದೃಷ್ಟಿ ಬೀಳದಿರಲಿ. ಯಾವನೇ ಪುರುಷನು ನನ್ನ ಮೇಲೆ ಕಾಮಭಾವನೆಯ, ಕಾಮಪೂರಿತ ದೃಷ್ಟಿಯನ್ನು ಬೀರಿದ್ದೇ ಆದರೆ ಅಂತಹವನು ಈ ಗಂಡೂ ಆಗದ ಆಕಡೆ ಹೆಣ್ಣೂ ಆಗದ ನಿರ್ವೀರ್ಯ ನಿರ್ಲಜ್ಜ ವ್ಯಕ್ತಿಯಾಗಲಿ ........"

ಎಂದು ಕೇಳಿದ ಕೂಡಲೆ ಭಗವಂತನು "ತಥಾಸ್ತು!" ಎಂದ.

ಈ ರೀತಿಯಲ್ಲಿ ಅವಿವಾಹಿತ ತರುಣಿಗೆ ಅಗತ್ಯವಾದ ಗುಣ ಲಕ್ಷಣಗಳನ್ನು ಪ್ರಪಂಚದಲ್ಲಿ ಪ್ರಪ್ರಥಮವಾಗಿ ರೂಪಿಸಿದವಳು ಸಂಧ್ಯಾ. ಹೆಣ್ಣು ಹೇಗಿರಬೇಕು, ಯಾವ ರೀತಿಯಲ್ಲಿ ದೈನಂದಿನ ಕಾರ್ಯ ಕ್ರಮಗಳನ್ನು ರೂಪಿಸಿಕೊಂಡು ಅದರಂತೆ ನಡೆದು ಕೊಳ್ಳಬೇಕು ಎಂಬುದನ್ನು ತಿಳಿಯಪಡಿಸಿ

ದವಳು ಸಂಧ್ಯಾ. ಇದರೊಂದಿಗೆ ನಪುಂಸಕನ ಸೃಷ್ಟಿಯೂ ಆಯಿತು. ಹೆಣ್ಣಿನ ಮೇಲೆ ಮಾನಸಿಕ ಶರೀರಾತ್ಮಕ ದೌರ್ಜನ್ಯ ನಡೆಸುವವರು ಈ ರೀತಿ ಆಗುತ್ತಾರೆಂಬುದನ್ನು ಪರೋಕ್ಷವಾಗಿ ಸಂಧ್ಯಾಳು ತೋರಿಸಿ ಕೊಟ್ಟಳು.

ನಂತರ ಪರಮಾತ್ಮನು ಹೀಗೆಂದು ಮುಂದು ವರೆಸಿದ, "ಭದ್ರೆ! ಪ್ರತಿಯೊಬ್ಬ ಮಾನವನೂ ನಾಲ್ಕು ಅವಸ್ಥೆಗಳನ್ನು ಇನ್ನು ಮುಂದೆ ಅನುಭವಿಸ ಬೇಕಾಗುತ್ತದೆ. ಅವೇ ಬಾಲ್ಯ, ಕೌಮಾರ್ಯ, ಯವ್ವನ ಮತ್ತು ವೃದ್ಧಾಪ್ಯ. ಇದರಲ್ಲಿ ಎರಡನೆ ಅವಸ್ಥೆಯ ಅಂತ್ಯದಲ್ಲಿ ಪ್ರಾಕೃತಿಕವಾಗಿ, ಅಂತ ರಿಕವಾಗಿ ಕಾಮಭಾವನೆಯು ಉದಯಿಸುತ್ತದೆ ಇದು ಸಂತಾನೋತ್ಪತ್ತಿಗೆ ಬಹಳ ಅವಶ್ಯಕ.

"ನಿನ್ನ ಸತೀತ್ವದ ಖ್ಯಾತಿಯು ಮೂರು ಲೋಕ ಗಳಲ್ಲಿಯೂ ಉಂಟಾಗಲಿ. ನಿನ್ನ ಪತಿಯ ವಿನಹ ಬೇರೆ ಯಾರಾದರೂ ನಿನ್ನನ್ನು ಕಾಮದೃಷ್ಟಿಯಿಂದ ನೋಡಿದ್ದೆ ಆದರೆ ಅಂತಹವರು ನಪುಂಸಕರಾಗಲಿ. ನಿನ್ನ ಪತಿಯು ಬಹಳ ಭಾಗ್ಯವಂತನೂ, ತಪ ಸ್ವಿಯೂ, ಸುಂದರನೂ ಆಗಿ, ನಿನ್ನೊಂದಿಗೆ ಏಳು ಕಲ್ಪಗಳವರೆಗೂ ಜೀವಿಸಿರುವವನೂ ಆಗಿರುತ್ತಾನೆ. ನೀನು ಕೇಳುವ ವರಗಳನ್ನೆಲ್ಲ ಅನುಗ್ರಹಿಸಿದ್ದೇನೆ

"ಆದರಿಂದ ನಿನ್ನ ಮನಸ್ಸಿನಲ್ಲಿನ ಮಾತನ್ನು ತಿಳಿಸುವೆನು, ಕೇಳು! ನೀನು ಮೊದಲು ಬೆಂಕಿ ಯಲ್ಲಿ ಜಿಗಿದು ನಿನ್ನ ಶರೀರವನ್ನು ತ್ಯಜಿಸ ಬೇಕೆಂದು ಪ್ರತಿಜ್ಞೆ ಮಾಡಿದ್ದೆ. ಈ ಪ್ರತಿಜ್ಞೆ ಯನ್ನು ಮಾಡಲು ಕಾರಣ ನಿನ್ನ ಮೇಲೆ ಯಾರದೊ ಕಾಮದೃಷ್ಟಿಯು ಬಿದ್ದಿದ್ದೆ ಆಗಿತ್ತು. ಇದರಿಂದ ನಿರ್ದೋಷವಾಗಿದ್ದರೂ ನಿನ್ನ ದೇಹ ವನ್ನು ತ್ಯಜಿಸಬೇಕೆಂದು ಕೊಂಡೆ. ಅದು ಯೋಗ್ಯವೆಂದೂ ನಿರ್ಧರಿಸಿದೆ. ಇಲ್ಲೆ ಹತ್ತಿರದಲ್ಲಿ ಚಂದ್ರಭಾಗಾ ನದಿ ಇದೆ. ಅದರ ದಡದಲ್ಲಿ ಮೇಧಾ ತಿಥಿ ಎನ್ನುವ ಮಹರ್ಷಿಯು ಹನ್ನೆರಡು ವರ್ಷಗ ಳಲ್ಲಿ ಮುಗಿಯುವ ಒಂದು ಯಜ್ಞವನ್ನು ನಡೆ ಸುತ್ತಿದ್ದಾನೆ. ಅಲ್ಲಿ ಹೋಗಿ ನಿನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿಕೊ ಹೋಗು. ಆದರೆ ಅಲ್ಲಿಗೆ ಹೋಗ ಬೇಕಾದರೆ ಅವರ ದೃಷ್ಟಿ ನಿನ್ನ ಮೇಲೆ ಬೀಳದ ರೀತಿಯಲ್ಲಿ ಇರಬೇಕು. ನನ್ನ ಕೃಪೆಯಿಂದ ನೀನೀಗ ಅಗ್ನಿದೇವನ ಮಗಳಾಗಿರುವೆ. ಯಾರನ್ನು ನೀನು ಪತಿಯೆಂದು ಮನದಲ್ಲಿ ಒಪ್ಪಿರುವೆಯೊ ಅವನನ್ನು ಧ್ಯಾನಿಸುತ್ತಾ ಆ ಅಗ್ನಿಯಲ್ಲಿ ನಿನ್ನ ಶರೀರವನ್ನು ತ್ಯಜಿಸು........"

ಹೀಗೆಂದು ಹೇಳಿದ ಭಗವಂತನು ತನ್ನ ಪವಿತ್ರ ವಾದ ಕರಕಮಲದಿಂದ ಅವಳ ಶರೀರವನ್ನು ಸ್ಪರ್ಶಿಸಿದ. ಕೂಡಲೆ ಅವಳ ಶರೀರವು ಪುರೋ ಡಾಶ (ಯಜ್ಞದ ಹವಿಸ್ಸು) ವಾಗಿ ಪರಿವರ್ತಿತವಾ ಯಿತು. ಲೋಕಕಲ್ಯಾಣಕ್ಕಾಗಿ ನಡೆಯುವ ಆ ಯಜ್ಞದಲ್ಲಿ ಅಗ್ನಿಯು ಮಾನವ ಮಾಂಸ ಭೋಜನ ಮಾಡದಂತೆ ಈ ರೀತಿ ಮಾಡಿದ. ಮುಂದೆ ಇದೇ ರೂಢಿಯಾಯಿತು. ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸುವ ಸಂಪ್ರದಾಯ ಇಲ್ಲಿಂದ ಪ್ರಾರಂಭವಾಯಿತು.

ಭಗವಂತನ ಅದೃಶ್ಯನಾದನು. ಸ್ವತಃ ಸಂಧ್ಯಾಳು ತನ್ನನ್ನು ತಾನು ನೋಡಿಕೊಳ್ಳಲು ಸ್ವತಃ ಅದೃಶ್ಯಳಾಗಿರುವುದನ್ನು ಕಂಡು ಕೊಂಡಳು. ಇದರಿಂದ ಸಂತುಷ್ಟಳಾಗಿ, ಯಜ್ಞ ಮಂಟಪವನ್ನು ಹೋಗಿ ತಲುಪಿದಳು ಆಗ ಅವಳ ಮನಸ್ಸಿನಲ್ಲಿ ಒಂದೇ ಒಂದು ಭಾವನೆ ಇತ್ತು–'ಬ್ರಹ್ಮಚರ್ಯದ ಪ್ರತಿರೂಪವಾದ ವಸಿಷ್ಠನು ನನ್ನ ಪತಿದೇವನಾಗಿ ರಲಿ'.

ಈ ರೀತಿಯಲ್ಲಿ ವಸಿಷ್ಠನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ತನ್ನ ಪುರೋಡಾಶನಾಯ ಶರೀರ ವನ್ನು ಪುರೋಡಾಶದ ರೂಪದಲ್ಲಿಯೆ ಅಗ್ನಿದೇವ ನಲ್ಲಿ ಅರ್ಪಿಸಿಕೊಂಡಳು.

ಕೂಡಲೆ ಭಗವಂತನ ಆಜ್ಞೆಯಂತೆ ಅಗ್ನಿ ದೇವನು ಸಂಧ್ಯಾಳ ಶರೀರವನ್ನು ದಹಿಸಿ ಸೂರ್ಯ ಮಂಡಲಕ್ಕೆ ಸೇರಿಸಿದ. ಸೂರ್ಯನು ಆ ದೇಹವನ್ನು ಎರಡು ಭಾಗಗಳಾಗಿ ಮಾಡಿ ದೇವ ತೆಗಳು ಹಾಗೂ ಪಿತೃಗಳನ್ನು ಪ್ರಸನ್ನಗೊಳಿಸಲು ತನ್ನ ರಥದ ಮೇಲೆ ಸ್ಥಾಪಿಸಿದ. ಆ ಶರೀರದ ಮೇಲ್‌ಸ್ತರದ ಭಾಗವೆ ಪ್ರತಿದಿನದ ಪ್ರಾರಂಭ ದಲ್ಲಿ ಕಾಣುವ ಪ್ರಾತಃಕಾಲವಾಗಿರುತ್ತದೆ. ಇದೆ 'ಪ್ರಾತಃ ಸಂಧ್ಯಾ' ಆಗಿದೆ. ಉಳಿದ ಕೆಳಸ್ತರದ ಭಾಗವು ಸಾಯಂಕಾಲದ ಸಮಯದಲ್ಲಿ ಕಾಣಿ ಸುತ್ತದೆ ಇದೇ 'ಸಾಯಂಸಂಧ್ಯಾ' ಆಗಿರುವುದು.

ಈ ರೀತಿಯಲ್ಲಿ ಕುಮಾರಿ ಸಂಧ್ಯಾಳು ತ್ಯಾಗ ಹಾಗೂ ತಪಸ್ಸುಗಳ ಮೂರ್ತರೂಪಳಾಗಿದ್ದಳು, ಅಗ್ನಿಗೆ ಹವಿಸ್ಸಿನ ರೂಪದಲ್ಲಿ ತನ್ನ ಕರ್ತವ್ಯವನ್ನು ನಿರ್ವಹಿಸಿದಳು, ಸದಾ ನಿರ್ವಹಿಸುತ್ತಲೂ ಇದ್ದಾಳೆ. ಪರರಿಗಾಗಿ ತನ್ನನ್ನೆ ಸುಟ್ಟುಕೊಳ್ಳು ತ್ತಿದ್ದಾಳೆ. ಹೆಣ್ಣೆಂದರೆ ಇತರರಿಗಾಗಿ ದೇಹವನ್ನು ಶ್ರಮಿಸಬೇಕು ಎಂಬುದನ್ನೇ ತನ್ನ ಜೀವನಾದರ್ಶ ದಿಂದಲೇ ತೋರಿಸಿ ಕೊಟ್ಟಿದ್ದಾಳೆ. ಇದು ಎಲ್ಲ ಹೆಣ್ಣುಗಳೂ ಅನುಸರಿಸಬೇಕಾದುದು ಅವಶ್ಯ.

ಭಗವಂತನ ವರಪ್ರಸಾದದಿಂದ ಇವಳೇ ಮುಂದಿನ ಜನ್ಮದಲ್ಲಿ ಅರುಂಧತಿಯಾಗಿ ಮಹರ್ಷಿ ವಸಿಷ್ಠರ ಕೈಹಿಡಿದು 'ಪತಿವ್ರತಾ ಶಿರೋಮಣಿ, ಧರ್ಮಸತಿ' ಎಂಬ ಹೆಸರನ್ನು ಗಳಿಸಿದಳು.

[ಆಧಾರಗಳಿಂದ]

# ಯುವವಾಣಿ

# ಚಿಂತನ ದ್ವಯ

## ಗುರು

ಗುರುರ್ಬ್ರಹ್ಮಾ ಗುರುರ್ವಿಷ್ಣುಃ
ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ಪರಂ ಬ್ರಹ್ಮ
ತಸ್ಮೈ ಶ್ರೀಗುರವೇ ನಮಃ ॥

ಎಂಬುದು ಗುರುಪ್ರಾರ್ಥನೆಗಳಲ್ಲಿ ಒಂದು. ಗುರುವಿಗೆ ಇಂತಹ ಶ್ರೇಷ್ಠ ಸ್ಥಾನವನ್ನು ಕೊಟ್ಟಿರುವ ಕಾರಣವನ್ನು ಅರಿಯಬೇಕಾದರೆ 'ಗುರು' ಶಬ್ದದ ಅರ್ಥವನ್ನು ಮೊದಲು ತಿಳಿಯಬೇಕು.

ಗುಕಾರಸ್ತ್ವಂಧ ಕಾರಸ್ತು
ರುಕಾರಸ್ತನ್ನಿರೋಧಕಃ ।
ಅಂಧಕಾರ ನಿರೋಧತ್ವಾತ್
ಗುರುರಿತ್ಯಭಿಧೀಯತೇ ॥

ಅಂದರೆ ನಮ್ಮಲ್ಲಿರುವ ಅಂಧಕಾರಮಯವಾದ ಅಜ್ಞಾನವನ್ನು ಹೋಗಲಾಡಿಸಿ ಸುಜ್ಞಾನದ ಬೆಳಕನ್ನುಂಟು ಮಾಡುವವನೇ ಗುರು. ಇಹಲೋಕದ ಬಾಳ್ವೆಗಾಗಲೀ ಅಥವ ಪರದ ಮೋಕ್ಷಕ್ಕಾಗಲೀ ಗುರೂಪದೇಶ ಬೇಕೇ ಬೇಕು. ಗುರುಗಳ ಉಪದೇಶವಿಲ್ಲದ ಮಂತ್ರಗಳು ನಿಷ್ಫಲವೆನ್ನುತ್ತದೆ 'ತಂತ್ರಶಾಸ್ತ್ರ'. ಎಲ್ಲ ಮಂತ್ರಗಳೂ ಪುಸ್ತಕದಲ್ಲೇ ಅಚ್ಚಾಗಿವೆ. ಆದರೆ ಅದು ಗುರು ಮುಖೇಣ ಉಪದೇಶವಾದಲ್ಲದೆ ಸಿದ್ಧಿಸುವುದಿಲ್ಲ.

ಗುರುವಿನ ಬಗ್ಗೆ ವಿಶ್ವದ ಯಾವ ಸಂಸ್ಕೃತಿಯಲ್ಲೂ ಇಲ್ಲದಂತಹ ಒಂದು ವಿಶಿಷ್ಟಸ್ಥಾನ ಭಾರತೀಯ ಸಂಸ್ಕೃತಿಯಲ್ಲಿದೆ. ಬ್ರಹ್ಮಜ್ಞಾನವನ್ನು ಪಡೆಯಲಂತೂ ಗುರುವಿನ ಸಾನ್ನಿಧ್ಯ ಬೇಕೇ ಬೇಕು. ಇದನ್ನೇ ಮುಂಡಕೋಪನಿಷತ್ತಿನಲ್ಲಿ ಹೀಗೆ ಹೇಳಿದೆ.

ತದ್ವಿಜ್ಞಾನಾರ್ಥಂ
ಗುರುಮೇವಾಭಿಗಚ್ಛೇತ್ ।
ಸಮಿತ್ಪಾಣಿಃ ಶ್ರೋತ್ರಿಯಂ
ಬ್ರಹ್ಮನಿಷ್ಠಮ್ ॥

ಎಲ್ಲ ಶಾಸ್ತ್ರಗಳನ್ನು ಚೆನ್ನಾಗಿ ಬಲ್ಲವನಾಗಿ ಎಷ್ಟೋ ಬುದ್ಧಿವಂತನಾಗಿದ್ದರೂ ಸಹ ಬ್ರಹ್ಮಜ್ಞಾನವನ್ನು ಪಡೆಯ ಬೇಕಾಗಿದ್ದರೆ ಶಾಸ್ತ್ರ ಸಂಪನ್ನನೂ, ಶ್ರೋತ್ರಿಯನೂ, ಬ್ರಹ್ಮನಿಷ್ಠನೂ ಆದ ಗುರುವಿನ ಆಶ್ರಯವನ್ನು ಪಡೆಯಲೇ ಬೇಕು.

ಇದೇ ಮಾತನ್ನು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ;

ತದ್ವಿದ್ಧಿ ಪ್ರಣಿಪಾತೇನ
ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ
ಜ್ಞಾನಿನಸ್ತತ್ತ್ವ ದರ್ಶಿನಃ ॥

ಎಂದು ಹೇಳಿದ್ದಾನೆ. ಅಂದರೆ ಸದ್ಗುರುಗಳಿಗೆ ಅಭಿವಂದಿಸಿ ಅವರ ಸೇವೆ ಮಾಡುತ್ತಾ ಅವರಲ್ಲಿ ಪ್ರಶ್ನಿಸಿದಾಗ ತತ್ತ್ವ ದರ್ಶಿಗಳಾದ ಜ್ಞಾನಿಗಳು ಜ್ಞಾನವನ್ನು ಉಪದೇಶಿಸುತ್ತಾರೆ.

ಬ್ರಹ್ಮಜ್ಞಾನವು ಗುರುವಿನಿಂದಲೇ ಲಭ್ಯವೆಂಬುದನ್ನು ಸರ್ವಜ್ಞನು

ತಂದೆಗೆ ಗುರುವಿಗೆ ಒಂದು ಅಂತರವುಂಟು
ತಂದೆ ಹೇಳುವನು ಬಹುಬುದ್ಧಿ
ಗುರುರಾಯ ಬಂಧನವ ಕಳೆವ

ಎಂದಿದ್ದಾನೆ.

ವಿದ್ಯೆಯನ್ನು ಕಲಿಯಲು ಮೂರು ಮಾರ್ಗಗಳಿವೆ.

ಗುರು ಶುಶ್ರೂಷಯಾ ವಿದ್ಯಾ
ಪುಷ್ಕಲೇನ ಧನೇನ ವಾ ।
ಅಥವಾ ವಿದ್ಯಯಾ ವಿದ್ಯಾ
ಚತುರ್ಥೀ ನೋಪಲಭ್ಯತೇ ॥

ಅಂದರೆ ಗುರುವಿನ ಶುಶ್ರೂಷೆ ಮಾಡಿ ಆತನ ಮನವೊಲಿಸಿ ವಿದ್ಯೆ ಕಲಿಯುವುದು ಮೊದಲನೆಯ ಕ್ರಮ. ಹಣವನ್ನು ಕೊಟ್ಟು ವಿದ್ಯಾರ್ಜನೆ ಮಾಡುವುದು ಎರಡನೆಯದು. ತನಗೆ ಬಂದ ವಿದ್ಯೆಯನ್ನು ಅನ್ಯರಿಗೆ ಹೇಳಿಕೊಟ್ಟು ಅವರಲ್ಲಿರುವ ಬೇರೊಂದು ವಿದ್ಯೆಯನ್ನು ತಾನು ಕಲಿಯುವುದು ಮೂರನೆಯ ಕ್ರಮ. ಇವುಗಳಲ್ಲಿ ಮೊದಲನೆಯ ಕ್ರಮವೇ ಶ್ರೇಷ್ಠವಾದುದು. ಆದ್ದರಿಂದಲೇ ಪುರಂದರದಾಸರು 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದಿದ್ದಾರೆ. ಸ್ವಾಮಿ ವಿವೇಕಾನಂದರು ನಮ್ಮ ಪ್ರಾಚೀನ ಗುರುಕುಲವಾಸದ ವಿದ್ಯಾಭ್ಯಾಸದ ಕ್ರಮವನ್ನು ಬಹಳ ಕೊಂಡಾಡಿದ್ದಾರೆ. ಗುರುವಿನ ಅನುಕರಣೀಯವಾದ ಅನೇಕ ಉತ್ತಮ ಗುಣಗಳೇ ಶಿಷ್ಯನಿಗೆ ಅಮೂಲ್ಯ ವಿದ್ಯೆಯಾಗಿತ್ತು. ಸರ್ವಜ್ಞನು,

ಗುರುಪಾದ ಸೇವೆ
ತಾ ದೊರಕೊಂಡಿತಾದಲ್ಲಿ
ಪಿರಿದಾದ ಪಾಪ ಹರಿಯುವುದು
ಕಪ್ಪುರದ
ಗಿರಿಯು ಸುಟ್ಟಂತೆ–

ಎಂದಿದ್ದಾನೆ. ಗುರುವಿನ ಸೇವೆಯಿಂದಲೇ ಸಮಸ್ತ ಪಾಪಗಳೂ ಪರಿಹಾರವಾಗಿ ಸರ್ವವಿದ್ಯೆಗಳೂ ಲಭಿಸುತ್ತವೆ. ಇದರ ಕಾರಣವನ್ನು ತಂತ್ರಯೋಗದಲ್ಲಿ ಹೀಗೆ ಹೇಳಿದೆ.

ಶಕ್ತಿಪಾತಾನುಸಾರೇಣ
ಶಿಷ್ಯೋऽನುಗ್ರಹಮರ್ಹತಿ ।

ಅಂದರೆ ಶಕ್ತಿಪಾತ ವಿಧಿಯಿಂದ ಗುರುವು ಶಿಷ್ಯನಿಗೆ ಅನುಗ್ರಹಿಸುತ್ತಾನೆ. ಇದು ಸ್ವಾಮಿ ವಿವೇಕಾನಂದರಿಗೆ ರಾಮಕೃಷ್ಣ ಪರಮಹಂಸರಿಂದ ಒದಗಿತು. ಗುರುವಿನ ಅನುಗ್ರಹವು ಆಯಿತಾದರೆ,

ಮೂರಿಟ್ಟರಾರಕ್ಕು ಆರು ಹನ್ನೆರಡಕ್ಕು
ಹೇರುವಾ ಗೊಡ್ಡು ಹಯನಕ್ಕು

ಎಂದಿದ್ದಾನೆ ಸರ್ವಜ್ಞಕವಿ.

**ಶ್ರೀ ಕೆ. ಕೇಶವಮೂರ್ತಿ**

ಗುರುವಿನ ಮಹತ್ತ್ವದ ಬಗ್ಗೆ ಶರಣರು ಹರ ಮುನಿದೊಡೆ ಗುರು ಕಾವಂ"ಎಂಬುದು ಗುರುವಿನ ಅನುಗ್ರಹ ಶಕ್ತಿಗೊಂದು ಸಾಕ್ಷಿ. ಆದ್ದರಿಂದಲೇ'ಗುರುವಚನ ಮುಲಂಘನೀಯಂ' ಎಂಬುದು. ಅಂದರೆ ಗುರುವಿನ ಮಾತು ತಿರಸ್ಕರಿಸತಕ್ಕದ್ದಲ್ಲ. ಸರ್ವಜ್ಞನು 'ಗುರುವ ನಿಂದಿಸಬೇಡ' ಎಂದಿದ್ದಾನೆ. ನಾಮಾಪರಾಧ ಗಳಲ್ಲಿ 'ಗುರೋರವಜ್ಞಾ'-ಅಂದರೆ ಗುರು ವನ್ನು ಅಲ್ಲಗಳೆಯುವುದೂ ಒಂದು. ಗುರು ವಿಗೆ ಅನುಗ್ರಹ ಶಕ್ತಿಯಿರುವಂತೆಯೇ ನಿಗ್ರಹ ಶಕ್ತಿಯೂ ಇರುತ್ತದೆ. ಆದ್ದರಿಂದಲೇ ಗುರುವಿನ ಆಗ್ರಹಕ್ಕೆ ಶಿಷ್ಯನು ಪಾತ್ರನಾಗ ಬಾರದು. ಕರ್ಣನು ಎಷ್ಟೇ ವಿದ್ಯೆಯನ್ನು ಕಲಿತರೂ ಗುರು ಶಾಪಕ್ಕೊಳಗಾದದ್ದರಿಂದ ಆತನ ವಿದ್ಯೆಯೆಲ್ಲವೂ ವ್ಯರ್ಥವಾಯಿತು. ಪ್ರತ್ಯಕ್ಷವಾಗಿ ಗುರುವಿನಿಂದ ಕಲಿಯದಿದ್ದರೂ ಗುರುವಿನ ಅನುಗ್ರಹವಿದ್ದುದರಿಂದ ಏಕ ಲವ್ಯನು ಗುರುಭಕ್ತಿಯಿಂದ ಅಸ್ತ್ರವಿದ್ಯಾ ಪಾರಂಗತನಾದನು.

ಇವೆಲ್ಲವೂ ಪ್ರಾಚೀನ ಭಾರತದಲ್ಲಿ ಗುರುವಿಗಿದ್ದ ಸ್ಥಾನ. ಅಂದರೆ ಇಂದು ಪರಿಸ್ಥಿತಿ ಬದಲಾಯಿಸಿದೆ. ಗುರುವಿನ ಸ್ಥಾನವು ಈ ಯುಗದಲ್ಲಿ ಯಾವ ಮಟ್ಟಕ್ಕಿಳಿದಿದೆಯೆಂಬು ದನ್ನು ಅಲ್ಲಮಪ್ರಭುವಿನ ವಚನವೊಂದು ಸೊಗಸಾಗಿ ಪ್ರತಿಬಿಂಬಿಸಿದೆ.

"ಕಲಿಯುಗದಲ್ಲಿ ಗುರು ಶಿಷ್ಯರಿಗೆ ವಂದಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದ ವೆಂಬೆನಯ್ಯಾ" ಎಂದಿದ್ದಾರೆ ಅಲ್ಲಮಪ್ರಭು. ಗುರುವೇ ಶಿಷ್ಯನಿಗೆ ಹೆದರಿ ಬೋಧಿಸುವ ಕಾಲ ಬಂದಿದೆ. ದೋಷವು ಗುರುಶಿಷ್ಯರಿಬ್ಬರ ಲ್ಲಿಯೂ ಇವೆ. ಇಂದು ಇರುವ ಪರಿಸ್ಥಿತಿ ಈ ಕೆಳಕಂಡಂತಿದೆ.

ಗುರವಃ ಬಹವಸ್ಸಂತಿ
ಶಿಷ್ಯವಿತ್ತಾಪಹಾರಕಾಃ ।

ಗುರವಃ ವಿರಳಾಸ್ಸಂತಿ
ಶಿಷ್ಯಚಿತ್ತಾಪಹಾರಕಾಃ ।

ಗುರುಗಳು ಶಿಷ್ಯನ ಹಣವನ್ನು ಅಪಹಾರ ಮಾಡುವ ಬದಲು ಆತನ ಮನಸ್ಸನ್ನು ಅಪಹಾರ ಮಾಡಿದರೆ ಪರಿಸ್ಥಿತಿಯು ಉತ್ತಮವಾಗುತ್ತದೆ.

# ಮುಖಸ್ತುತಿ

ನಮ್ಮನ್ನು ಯಾರಾದರೂ ತೆಗಳಿದರೆ ನಮಗೆ ಬೇಸರವಾಗುವಂತೆಯೇ ಹೊಗಳಿದರೆ ಸಂತೋಷವಾಗುತ್ತದೆ. ಇದಕ್ಕೆ ಕಾರಣ ಸಹಜವಾದ ಸ್ತುತಿಪ್ರಿಯತೆ. ತನ್ನ ಕಾರ್ಯ ಸಾಧನೆಯನ್ನು ಕಂಡು ಇತರರು ತನ್ನನ್ನು ಹೊಗಳಬೇಕೆಂಬುದೇ ಆತನ ಹೆಬ್ಬಯಕೆ, ಹಾಗೆ ಹೊಗಳಿದಾಗ ಆತ ಚತುರ್ಭುಜನಾಗು

ತ್ತಾನೆ; ಹೆಮ್ಮೆಯಿಂದ ಬೀಗುತ್ತಾನೆ; ಮಾನಸಿಕವಾಗಿ ಪ್ರಫುಲ್ಲಿತನಾಗುತ್ತಾನೆ. ಉಪನ್ಯಾಸ ನೀಡಿದ ಪ್ರವಚನಕಾರನೊಬ್ಬನನ್ನು "ನಿಮ್ಮ ಉಪನ್ಯಾಸ ಬಹಳ ಬೋಧಪ್ರದವಾಗಿತ್ತು' ಎಂದು ಶ್ರೋತೃಗಳು ಹೇಳಿದರೆ ಆತನ ಉತ್ಸಾಹ ಹೆಚ್ಚುತ್ತದೆ. ಇನ್ನೂ ಚೆನ್ನಾಗಿ ಪ್ರವಚನ ನೀಡಬೇಕೆಂದು ಆತ ಹವಣಿಸುತ್ತಾನೆ. ಅಂತೆಯೇ ಊಟ ಮಾಡುತ್ತಿರುವಾಗ ಅಡಿಗೆಯು ಹೇಗಿದೆ ಎಂದು ಹೆಂಡತಿಯು ಕೇಳಿದಾಗ "ಬಹಳ ರುಚಿಯಾಗಿದೆ" ಎಂದರೆ ಆಕೆ ಸುಪ್ರೀತಳಾಗುತ್ತಾಳೆ. ಮತ್ತೂ ರುಚಿಕರವಾಗಿ ಅಡಿಗೆ ಮಾಡಲು ಪ್ರಯತ್ನಿಸುತ್ತಾಳೆ.

ಹೀಗೆ ಕೆಲವು ಸಂದರ್ಭಗಳಲ್ಲಿ ಹೊಗಳಿಕೆಯು ಅಪೇಕ್ಷಣೀಯವಾದರೂ, ಮಾನವನ ಗುರಿ ಕೇವಲ ಮುಖಸ್ತುತಿ ಮಾಡಿಸಿ ಕೊಳ್ಳುವುದರಲ್ಲಿಯೇ ಪರ್ಯವಸಾನವಾದರೆ ಅದರಿಂದೇನೂ ಸಾಧಿಸಿದಂತಾಗುವುದಿಲ್ಲ. ಈತನ ದೌರ್ಬಲ್ಯವನ್ನರಿತ ಜನರು ಈತನನ್ನು ಮುಖಸ್ತುತಿಗೈದು, ಅಟ್ಟಕ್ಕೇರಿಸಿ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವುದರಲ್ಲಿ ನಿರತರಾಗುತ್ತಾರೆ. ನರಿಯ ಹೊಗಳಿಕೆಗೆ ಮಾರುಹೋಗಿ ತನ್ನ ಕಂಠ ಮಾಧುರ್ಯವನ್ನು ಪ್ರದರ್ಶಿಸಿ ಬಾಯಿಯಲ್ಲಿದ್ದ ಆಹಾರವನ್ನು ಕಳೆದುಕೊಂಡ ಕಾಗೆಯಂತಾಗುತ್ತದೆ ಈತನ ಸ್ಥಿತಿ.

ಸ್ವಾರ್ಥ ಸಾಧನೆಗಾಗಿಯೇ ಅಲ್ಲದೆ ಅಗ್ಗದ ಜನಪ್ರಿಯತೆಯನ್ನು ಗಳಿಸಲೂ ಸಹ ಕೆಲವರು ಮುಖಸ್ತುತಿ ಮಾಡುವ ಹವ್ಯಾಸವನ್ನು ಬೆಳಸಿಕೊಂಡಿರುತ್ತಾರೆ. ಇದರಿಂದ ಅವರು ತಮ್ಮ ವ್ಯಕ್ತಿತ್ವಕ್ಕೆ ತಾವೇ ಕುಂದು ತಂದುಕೊಳ್ಳುವುದಲ್ಲದೆ ಹೇಳಿ ಕೊಟ್ಟದ್ದನ್ನು ತಪ್ಪಾಗಿ ಗ್ರಹಿಸಿ ತಪ್ಪನ್ನೇ ಎಸಗಿದ ವಿದ್ಯಾರ್ಥಿಯನ್ನು ಸುಮ್ಮನೆ ಹೊಗಳುವುದರಿಂದ ಆತನ ಕೇಡನ್ನು ಉಪಾಧ್ಯಾಯನೇ ಬಯಸಿದಂತಾಗುತ್ತದೆ. ಇದಕ್ಕೆ ಪ್ರತಿಯಾಗಿ ವಿದ್ಯಾರ್ಥಿಯ ತಪ್ಪನ್ನು ತಿದ್ದಿ ಆತನು ಸನ್ಮಾರ್ಗ ಪ್ರವರ್ತಕನಾಗುವಂತೆ ಮಾಡಬೇಕು.

ರಾವಣನು ಸೀತಾಪಹರಣ ಮಾಡುವುದನ್ನು ಆತನ ಕೆಲವು ಮಂತ್ರಿಗಳು ಅನುಮೋದಿಸುತ್ತಾರೆ. ಆದರೆ ಮಾರೀಚನು ಅದನ್ನು ಖಂಡಿಸಿ,

ಸುಲಭಾಃ ಪುರುಷಾಃ ರಾಜನ್<br>
ಸತತಂ ಪ್ರಿಯವಾದಿನಃ ।<br>
ಅಪ್ರಿಯಸ್ಯ ಚ ಪಥ್ಯಸ್ಯ<br>
ವಕ್ತಾ ಶ್ರೋತಾ ಚ ದುರ್ಲಭಃ ॥

ಎಂದು ಉಪದೇಶಿಸುತ್ತಾನೆ. ಅಂದರೆ ಯಾವಾಗಲೂ ಮನಸ್ಸಿಗೆ ಸಂತೋಷವನ್ನು ಉಂಟು ಮಾಡುವಂತೆ ಮಾತನಾಡುವ ಹೊಗಳು ಭಟ್ಟರು ಸಿಗುತ್ತಾರೆ. ಆದರೆ ಕೇಳಲು ಅಪ್ರಿಯವಾಗಿದ್ದರೂ ಶ್ರೇಯಸ್ಸನ್ನು ಉಂಟು ಮಾಡುವಂತಹ ಮಾತನ್ನು ಹೇಳುವರಾಗಲೀ ಕೇಳುವವರಾಗಲೀ ಸಿಗುವುದಿಲ್ಲ.

ಹೀಗೆಂದು ಹೇಳಿದ ಮಾತ್ರಕ್ಕೆ ಮತ್ತೊಬ್ಬರನ್ನು ಯಾವಾಗಲೂ ಹೊಗಳಬಾರದೆಂದಲ್ಲ. ಆ ಹೊಗಳಿಕೆಯ ಹಿನ್ನೆಲೆಯಲ್ಲಿ ಸ್ವಾರ್ಥ ಸಾಧನೆಯ ಎಳೆಯಾಗಲೀ, ಪರರಿಗೆ ಕೇಡು ಬಗೆಯುವ ದೃಷ್ಟಿಯಾಗಲಿ ಇರಬಾರದು. ಸುಭಾಷಿತದಲ್ಲಿ "ಪರಗುಣ ಪರಮಾಣೂನ್ ಪರ್ವತೀಕೃತ್ಯ ನಿತ್ಯಂ ನಿಜಹೃದಿ ವಿಕಸಂತಃ ಸಂತಿ ಸಂತಃ ಕಿಯಂತಃ" ಎಂದು ಹೇಳಿದೆ ಅಂದರೆ ಇನ್ನೊಬ್ಬರಲ್ಲಿರುವ ಸ್ವಲ್ಪವೇ ಸದ್ಗುಣಗಳನ್ನು ಪರ್ವತದಷ್ಟು ದೊಡ್ಡದು ಮಾಡಿ ಬಾಯ್ತುಂಬ ಹೇಳುವುದು ಸಜ್ಜನರ ಸಹಜ ಗುಣ. ಆದರೆ ಈ ಹೊಗಳಿಕೆಯಲ್ಲಿ ಕೃತ್ರಿಮವಿರುವುದಿಲ್ಲ.

ಆದ್ದರಿಂದ ಹೊಗಳುವುದರಲ್ಲಿ ಕೆಲವು ನಿಯಮಗಳನ್ನು ಅನುಸರಿಸಬೇಕೆಂದು ಮಹಾಭಾರತವು ತಿಳಿಸಿದೆ.

ಮುಂದೆ ಗುರುವನು ಬಂಧು ಜನವನು<br>
ಹಿಂದೆ<br>
ಕಾರ್ಯಾಂತ್ಯದಲಿ ಸೇವಕ<br>
ವೃಂದವನು ಕೊಂಡಾಡುವುದು<br>
ಸಾಹಿತ್ಯಭಾ

ಅಂದರೆ ಗುರುಗಳನ್ನು ಅವರ ಸಮುಖದಲ್ಲಿ ಬಂಧುಗಳನ್ನು ಅವರ ಪರೋಕ್ಷದಲ್ಲೂ ಕೆಲಸಗಾರರನ್ನು ಕೆಲಸ ಪೂರ್ತಿಯಾದ ಮೇಲೆ ಹೊಗಳಬೇಕು. ಗುರುಗಳನ್ನು ಮುಂ ಹೊಗಳಿದರೆ ಶಿಷ್ಯನ ಬಗ್ಗೆ ಗುರುವಿಗೆ ಅ ಮಾನ ಮೂಡುತ್ತದೆ. ಬಂಧುಗಳನ್ನು ಮುಂ ಹೊಗಳಿದರೆ ಅವರು ಅದನ್ನು ಮುಖಸ್ತು ಎಂದು ತಿಳಿಯುವ ಸಂಭವವೇ ಹೆಚ್ಚು ಕಾರ್ಯವಾದ ಮೇಲೆ ಕೆಲಸಗಾರನನ್ನು ಹೊಗಳಿದರೆ ಆತನ ಕೆಲಸಕ್ಕೆ ಬೆ ಕೊಟ್ಟಂತಾಗುತ್ತದೆ. ಆದರೆ "ನ ಸ್ವಪುತ್ರ ಕದಾಚನ ಸ್ತುತ್ಯಃ" ಎಂದು ಹೇಳಿ ಅಂದರೆ ಮಗನನ್ನು ಯಾವಾಗಲೂ ಹೊಗ ಬಾರದಂತೆ. ಇದಕ್ಕೆ ಕಾರಣ ಹೊಗಳಿ ಯಿಂದ ಉಬ್ಬಿಹೋದ ಮಗನ ಸದ್ಗು ಗಳು ವಿಕಾಸವಾಗದೆ ಮೊಟಕಾಗುವ ಸಂ ವವಿದೆ. ಅಲ್ಲದೆ,

ಜೀರ್ಣಂ ಅನ್ನಂ ಪ್ರಶಂಸಂತಿ<br>
ಭಾರ್ಯಾಂ ಚ ಗತಯೌವನಾಂ ।<br>
ಶೂರಂ ವಿಜಿತ ಸಂಗ್ರಾಮಂ<br>
ಪಾರಂಗತಂ ತಪಸ್ವಿನಾಂ ॥

ಎಂದು ಹೇಳಿದೆ. ಅಂದರೆ ನಾವು ಸೇವಿಸಿ ಆಹಾರವನ್ನು ಅದು ಜೀರ್ಣವಾದ ನಂತರ ಹೆಂಡತಿಯನ್ನು ಆಕೆಯ ವಾರ್ಧಕ್ಯದಲ್ಲಿ ಶೂರನನ್ನು ಯುದ್ಧದಲ್ಲ ವಿಜಯಿಯಾ ಬಂದ ನಂತರವೂ, ತಪಸ್ವಿಯನ್ನು ತಪಸ್ಸಿ ಸಿದ್ಧಿ ಪಡೆದ ನಂತರವೂ ಪ್ರಶಂಸಿಸಬೇಕ

ಹೀಗೆ ಸಮಯಾಸಮಯ ಮತ ಪಾತ್ರಾಪಾತ್ರಗಳನ್ನರಿತು ಸ್ತುತಿ ಮಾ ವುದರಿಂದ ಕೇಳುವವರಿಗೆ ಹಿತವಾಗುವುದಲ್ಲ ನಮ್ಮ ವ್ಯಕ್ತಿತ್ವದ ವಿಕಾಸವೂ ಆಗುತ್ತ

———

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿ ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಸ್. ರಾಮಕೃಷ್ಣಯ್ಯ<br>ೀ ಮಾರುತಿ ಕಾಫಿ ವರ್ಕ್ಸ್<br>್ಟೇಷನ್ ರಸ್ತೆ, ಹೊಸಪೇಟೆ.

. ವಿಜಯಕುಮಾರ್<br>ವಾನಿಶಂಕರ್ ಏಜನ್ಸಿ<br>.ಎಂ. ಹಳ್ಳಿ, ಕೂಡ್ಲಿಗಿ.

.ಪಿ. ರಾಮಕೃಷ್ಣ<br>ವಳಿ ವ್ಯಾಪಾರಿಗಳು<br>ಾಮರಾಜನಗರ.

. ಸತ್ಯನಾರಾಯಣ<br>ಾಲಾಜಿ ಏಜನ್ಸೀಸ್<br>೩, ಹಳೆಕಚೇರಿ ರಸ್ತೆ, ಬಳ್ಳಾರಿ.

ಸ್. ಶ್ರೀಕಂಠಯ್ಯ<br>ೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ<br>ಾಲಹಳ್ಳಿ, ಬೆಂಗಳೂರು.

ಸ್.ವಿ. ಕೃಷ್ಣಮೂರ್ತಿ<br>47, ಗುರುಕೃಪಾ<br>ಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ಂಕಟೇಶ ಶಿವಾಜಿ ಝಿಂಗಾಡೆ<br>ಾಮಕೃಷ್ಣ ರೆಡಿಮೇಡ್ ಸ್ಟೋರ್ಸ್<br>ುದ್ದೇಬಿಹಾಳ, ಬಿಜಾಪುರ.

.ಎಸ್. ಗೋಪಾಲಕೃಷ್ಣ<br>್ಬಂದಾವನ ಸ್ಟೋರ್ಸ್<br>0/125. 9ನೇ ಮೇನ್ 3ನೇ ಬ್ಲಾಕ್<br>ಯನಗರ, ಬೆಂಗಳೂರು.

.ಎಸ್. ವೆಂಕಟಾಚಲಪತಿಶೆಟ್ಟಿ<br>ನೇಶ್ ಸ್ಟೋರ್ಸ್<br>ಣಿಗಲ್.

ರ್.ಜಿ. ಏಜನ್ಸಿ<br>ೋಮವಾರಪೇಟೆ<br>ಾಯಚೂರು.

. ಗೋಪಾಲಶೆಟ್ಟಿ<br>್ಯೂಸ್ಏಜಂಟ್<br>ವಾನಂದಸ್ಟೋರ್ಸ್. ಮದ್ದೂರು.

.ಕೆ. ವೆಂಕಟೇಶನ್<br>ಡಿಟರ್, 1759, 9ನೇ ಕ್ರಾಸ್<br>ುಮಕೂರು.

ಬಿ.ಎಸ್. ಭಟ್<br>ಉದಯವಾಣಿ ಏಜಂಟ್<br>ಕಾಳೇಶ್ವರ.

ಸುಬ್ಬಾರಾವ್<br>ನ್ಯೂಸ್ಏಜಂಟ್, ಆಸ್ಪತ್ರೆರಸ್ತೆ<br>ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ<br>ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ<br>ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ<br>ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ<br>ಮಂಡ್ಯ.

ಪಿ.ಎಸ್. ನಾಗರತ್ನಮ್ಮ<br>W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್ಸ್<br>ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು<br>ಶಿವಪ್ಪ ನಾಯಕನಗರ<br>ಸಾಗರ.

ಎಸ್. ರತ್ನಮ್ಮ<br>ಸಲ್ಲಾಪುರ, ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ<br>ಉತ್ತರಾದಿಮಠ<br>ಚಿತ್ರದುರ್ಗ.

ಶ್ರೀಮತಿ ಬಿ.ಎಚ್. ಶೆಟ್ಟಿ<br>ಉಪ್ಪಳ ಬುರುಜು ಹಿಂಭಾರದಗಸ್ತಿ<br>ಬಿಜಾಪುರ.

ಎಸ್. ಮೂಡಲಗಿರಿರಾಜ<br>S/o ಶ್ರೀ ರಂಗಶೆಟ್ಟಿ, ಸಪ್ತಗಿರಿ ನಿಲಯ<br>ಭರಮಸಾಗರ.

ಶ್ರೀಮತಿ ರಾಜಗುರು<br>c/o ಡಿ.ಎಸ್.ಆರ್. ರಾಜಗುರು<br>ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ<br>ಹುಲಿಕಲ್ಲು,ಅರಕಲಗೂಡು(ತಾ)<br>ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ<br>ಪತ್ರಕರ್ತರು.ಓಲ್ಡ್ ಟೌನ್<br>ಭದ್ರಾವತಿ.

ಎ.ಎಂ. ಶ್ರೀನಿವಾಸ್.<br>ವಿನಾಯಕ ಟೈಲರ್ಸ್, ದೊಡ್ಡಪೇಟೆ<br>ಕೋಲಾರ.

ಟಿ.ಬಸಪ್ಪ<br>ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ<br>ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ<br>ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್<br>ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,<br>ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ<br>ಕೊಳ್ಳೇಗಾಲ.

ಬಿ.ಎಸ್. ಮುಕುಂದ<br>1275,ಶ್ರೀಪಾದರಾಜ ಮಠದ ಎದುರು<br>ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ<br>ಎಸ್.ಎ 93 ಪಿ.ಇ.ಎಲ್. ಕಾಲೋನಿ<br>ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ<br>ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್<br>ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ<br>W/o ಪಿ. ಸಾರಂಗಪಾಣಿ. ರೋಜರ್ಸ್ ಕ್ಯಾಂಪ್<br>ಬಿ.ಪಿ. ಬ್ಲಾಕ್<br>ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ<br>ಮದ್ದೂರು.

ಆರ್.ವಾಸುದೇವಶೆಟ್ಟಿ<br>ದಳಸನೂರು.

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆತ್ಯಾಕರ್ಷಕ ಕಮೀಷನ್ ಉಂಟು, ಕೂಡಲೇ ವ್ಯವಹರಿಸಿ.

**ವೆಲ್‌ಫೇರ್ ಆಫೀಸರ್. ತಿ.ತಿ.ದೇ. ತಿರುಪತಿ.**

ಆತ್ಮ ಚರಿತ್ರೆ

# ನಾನೇಕೆ ಹಾವಾದೆ?

ವಿದ್ವಾನ್ ಬ. ನ. ಗುಂಡೂರಾವ್

ನನ್ನ ಹೆಸರು, ನನ್ನ ವಿಚಿತ್ರ ಕಥೆ, ತಿಳಿದುಕೊಳ್ಳಬೇಕೆಂದು ನಿಮಗೆ ತುಂಬ ಕುತೂಹಲವಿದ್ದಂತಿದೆ. ಹಾಗಾದರೆ ಹೇಳುತ್ತೇನೆ ಕೇಳಿ–ನನ್ನ ಕಥೆ ಕೇಳಿ, ಅದರಿಂದ ನೀವೊಂದು ಪಾಠಕಲಿತರೆ ನನಗಷ್ಟೇ ಸಾಕು.

ನನ್ನ ಹೆಸರು ನಹುಷ, ಚಂದ್ರವಂಶದರಸರಲ್ಲಿ ಪ್ರಸಿದ್ಧನಾದ ಯಯಾತಿ ನನ್ನ ಮಗ. ಪಾಂಡವರು ಸಹ ನನ್ನ ವಂಶದವರೆ. ಅಖಂಡ ಆರ್ಯಾವರ್ತದಧಿಪತಿಯಾಗಿ, ಅಪಾರ ಐಶ್ವರ್ಯಕ್ಕೆ ಒಡೆಯನಾಗಿ, ಅನುಪಮ ಕೀರ್ತಿ ಪಡೆದಿದ್ದವನು ನಾನು. ನಮ್ಮ ಕಾಲದಲ್ಲಿ ಕ್ಷತ್ರಿಯರು ಅಶ್ವಮೇಧ–ರಾಜಸೂಯ ಮುಂತಾದ ಯಜ್ಞಗಳನ್ನು ಮಾಡುವ ಪದ್ಧತಿ ಇತ್ತು. ಇದಕ್ಕೆರಡು ಕಾರಣ – ಇಹಲೋಕದಲ್ಲಿ ಅಪಾರಕೀರ್ತಿ–ಪರಲೋಕದಲ್ಲಿ ಸದ್ಗತಿ ಬರುತ್ತವೆ. ಅಲ್ಲದೆ–ನೂರುಯಜ್ಞಗಳನ್ನು ಮಾಡಿದ ಚಕ್ರವರ್ತಿ ಮಹೇಂದ್ರ ಪದವಿಯನ್ನು ಪಡೆಯುತ್ತಾನೆ. ಮಹೇಂದ್ರ ಪದವಿ ಬರುತ್ತದೆಂಬ ಆಸೆಯೇ ಯಜ್ಞಗಳಿಗೆ ಪ್ರಚೋದನೆ ನೀಡುತ್ತಿತ್ತು. ಆಸೆ ಯಾರಿಗಾದರೂ ತಲೆ ಕೆಡಿಸುತ್ತದೆ. ಮರ್ತ್ಯಲೋಕದವರು ನೂರು ಯಜ್ಞಗಳನ್ನು ಸಾಂಗವಾಗಿ ಮಾಡಲಾಗದಂತೆ ದೇವೇಂದ್ರ ಅನೇಕ ತಂತ್ರಗಳನ್ನು ಮಾಡುತ್ತಾನೆ. ಅನೇಕ ವಿಘ್ನಗಳನ್ನೊಡ್ಡುತ್ತಾನೆ. ಇದೆಲ್ಲವನ್ನೂ ಜಯಿಸಿಕೊಂಡು ನೂರುಯಜ್ಞಗಳನ್ನು ಮಾಡಿದಾತನಿಗೆ ಅಮರಾವತಿ ಆಧಿಪತ್ಯ ಖಂಡಿತ ಬರುತ್ತದೆ: ರಂಭೆ–ಊರ್ವಶಿ–ಮೇನಕೆ–ತಿಲೋತ್ತಮೆ ಸುವದನೆ-ಮಂಜುಘೋಷೆ-ಘೃತಾಚಿ–ಸುಕೇಶಿ..........ಮುಂತಾದ ಅಪ್ಸರೆಯರು ಪಾದ ಸೇವಕಿಯರಾಗುತ್ತಾರೆ. ಮಹೇಂದ್ರ ಪದವಿಯೆಂದರೆ – ಅದರ ಕಲ್ಪನೆ ನಿಮಗೆ ಇರಲಾರದು. ಮುವತ್ತಮೂರು ಕೋಟಿ ದೇವತೆಗಳ ಮೇಲೆ ಅಧಿಪತ್ಯ!! ಅಷ್ಟದಿಕ್‌ಪಾಲಕರೆಲ್ಲ ಭೃತ್ಯಾನುಭೃತ್ಯರಾಗಿರುತ್ತಾರೆ-ನಾನೂ ಆ ಮಹೇಂದ್ರ ಪದವಿಯನ್ನು ಪಡೆದೆ. ಕಾಮಧೇನು–ಕಲ್ಪವೃಕ್ಷಗಳ ಮೇಲೆ ಒಡೆತನ ಬಂತು. ಸ್ಪರ್ಶಮಣಿ–ನನ್ನರಮನೆಯ ಮುಂದೆ ಬಯಲಿಗೆ ಹಾಸಿದ್ದ ಕಲ್ಲಾಗಿತ್ತೆಂದರೆ ನಿಮಗೆ ಆಶ್ಚರ್ಯವಾದೀತು. ಅಖಂಡ ಸಾಮ್ರಾಜ್ಯ, ಅನುಪಮ ವೈಭವ–ಮಹೋನ್ನತ ಅಧಿಕಾರ–ಎಲ್ಲವೂ ನನ್ನ ಕೈಗೆ ಬಂತು. ಅಧಿಕಾರ–ಐಶ್ವರ್ಯಗಳು ಕೂಡಿ ಬಂದಾಗ ಅಹಂಕಾರದಿಂದ ತಲೆ ತಿರುಗುವುದು ಸಹಜ. ಯಾರಿಗೆ ತಲೆ ತಿರುಗದೋ – ಅವನು ಮಹಾತ್ಮ. ಆ ವಿಚಾರ ಬೇರೆ–ನನಗೂ ಅಹಂಕಾರ ಬಂತು–ವಿನಾಶಕಾಲಕ್ಕೆ ವಿಪರೀತಬುದ್ಧಿ ಬಂದೇ ತೀರುತ್ತದೆ.

ಒಂದುದಿನ ನನಗೊಂದು ವಿಚಿತ್ರಯೋಚನೆ ಬಂತು. ನಾನು ಮುತ್ತಿನ ಪಲ್ಲಕ್ಕಿಯಲ್ಲಿ–ಕಿಂಕಾಪಿನ ದಿಂಬಿಗೊರಗಿ ಕೂತಿರಬೇಕು. ಸಪ್ತರ್ಷಿಗಳು ಪಲ್ಲಕ್ಕಿಯನ್ನು ಹೊತ್ತು ತಿರುಗಬೇಕು. ಅಧಿಕಾರ ಬಂದಾಗ ಅದನ್ನು ಚಲಾಯಿಸದಿದ್ದರೆ ಪ್ರಯೋಜನವೇನು? ಮಹೇಂದ್ರ ಪದವಿಯಲ್ಲಿರುವಾತನ ಮಾತಿಗೆ ಪ್ರತಿಯಾಡುವ ಶಕ್ತಿ ಯಾರಿಗುಂಟು? ಸಪ್ತರ್ಷಿಗಳು ತುಂಬ ಬುದ್ಧಿವಂತರು. ನನ್ನನ್ನು ಕೊಂಡಾಡುತ್ತ ಒಂದು ಸಲಹೆ ಕೊಟ್ಟರು–ನೋಡು ನಹುಷ – ನೀನು ನರೇಂದ್ರನಾಗಿದ್ದವನು ಈಗ ಮಹೇಂದ್ರನಾದೆ, ನಿನ್ನ ಅಭ್ಯುದಯ ಕಂಡು ನಮಗಂತೂ ತುಂಬ ಸಂತೋಷವಾಗಿದೆ. ಆದರೆ ಶಚೀದೇವಿಯನ್ನು ಪಡೆಯದೆ ನಿನ್ನ ಮಹೇಂದ್ರ ಪದವಿ ಪೂರ್ಣವಾಗದು. ಆಕೆಯನ್ನು ಪಡೆದಾಗಲೇ ಮಹೇಂದ್ರ ಪದವಿ ಪರಿಪೂರ್ಣವಾಗುವುದು. ಶಚೀಸಮೇತ ನೀನು ಪಲ್ಲಕ್ಕಿಯಲ್ಲಿ ಕೂತರೆ ಅದೆಂತಹ ಭಾಗ್ಯ–ಎಂದರು. ಆಗ ಆ ಸಲಹೆ ನನಗೆ ಸರಿಯಾಗೇ ಕಂಡು ಬಂತು: ಇಂದ್ರಪತ್ನಿ ಶಚೀದೇವಿ ನನ್ನವಳಾಗಬೇಕೆಂದು ಹವಣಿಸಿದೆ. ಇರುವ ಸಂಪತ್ತನ್ನು ಬಿಟ್ಟು ಇಲ್ಲದ ವಸ್ತುವಿಗಾಗಿ ಹಲುಬಿ ಹಂಬಲಿಸುವುದು ಮಾನವ ಸ್ವಭಾವ,ಸರಿ. ಮಹರ್ಷಿಗಳು ಪಲ್ಲಕ್ಕಿ ಹೊರುತ್ತಿದ್ದಾರೆ–ನನ್ನ ಆನಂದಕ್ಕೆ ಪಾರವಿಲ್ಲದಂತಿದೆ. ಸ್ವಲ್ಪದೂರ ಹೋದನಂತರ ಪಲ್ಲಕ್ಕಿ ಹೊರುವ ಋಷಿಗಳು ಆಯಾಸ ಪಟ್ಟು ನಿಧಾನವಾಗಿ ಹೆಜ್ಜೆ ಹಾಕತೊಡಗಿದರು. ಪಲ್ಲಕ್ಕಿಯಲ್ಲಿ ಕೂತಿರುವವನಿಗೆ ಹೊರುವವನ ಕಷ್ಟವೇನು ಗೊತ್ತು! 'ಇದೇಕೆ ಹೆಜ್ಜೆ ಅಡ್ಡಾದಿಡ್ಡಿ ಹಾಕುತ್ತಿದ್ದೀರಿ? ಕೂತಿರುವ ನಮಗೆ ಆಯಾಸವಾಗುವುದಿಲ್ಲವೇ? ಸರ್ಪಗತಿಯಲ್ಲಿ ಹೋಗುವುದು ಬೇಡ ನೇರವಾಗಿ ಮತ್ತು ವೇಗವಾಗಿ ಹೆಜ್ಜೆ ಹಾಕಿ'–ಎಂದು ಗದರಿಸಿದೆ. ನನ್ನ ಮಾತು ಕೇಳಿ ಮಹರ್ಷಿ ಅಗಸ್ತ್ಯರಿಗೆ ತುಂಬ ಸಿಟ್ಟು ಬಂತು. ಅಗಸ್ತ್ಯರೆಂದರೆ ಸಾಮಾನ್ಯರಲ್ಲ. ಆತ ಸಿದ್ಧವಾಕ್–ಸಿದ್ಧಸಂಕಲ್ಪನಾದ ಮಹಾತ್ಮ. ವಿಂಧ್ಯಾಚಲದ ಗರ್ವವನ್ನು ಮೆಟ್ಟಿ ನಿಂತಾತ-ವಾತಾಪಿ ಇಲ್ವಲರ ಸೊಕ್ಕಣಗಿಸಿದ ಧೀರ. ಶ್ರೀರಾಮಚಂದ್ರನಿಗೆ ಆದಿತ್ಯ ಹೃದಯವೆಂಬ ದಿವ್ಯ ಮಂತ್ರವನ್ನುಪದೇಶಿಸಿದ ಋಷಿಪುಂಗವ. ನನ್ನ ದುರಹಂಕಾರದ ಮಾತಿಗೆ ಕುಪಿತನಾಗಿ–ನನಗೆ ಶಾಪ ಹಾಕಿದ. ತತ್ಪರಿಣಾಮವಾಗಿ ನಾನು ಘಟಸರ್ಪವಾಗಿ – ದುಷ್ಟಜಂತುವಾಗಿ ಯಾವುದೋ ಕಾಡಿನಲ್ಲಿ ಬಹುಕಾಲ ಬಿದ್ದಿರಬೇಕಾಯ್ತು. ಪ್ರತಿಯೊಂದು ಶಾಪಕ್ಕೂ ಒಂದು ನಿಶ್ಚಿತ ಅವಧಿ ಇರುತ್ತದೆ. ಅನಂತರವೇ ಬಿಡುಗಡೆ. ಕರುಣಾಳುವಾದ ಅಗಸ್ತ್ಯರು ನನ್ನ ಶಾಪಕ್ಕೂ ಒಂದು ನಿಶ್ಚಿತ ಗಡುವು ಸೂಚಿಸುವ ಕೃಪೆಮಾಡಿದರು. ನಿನ್ನ ವಂಶದಲ್ಲಿ ಬಹುಕಾಲಾನಂತರ ಪಂಚಪಾಂಡವರೆಂಬ ಹೆಸರಿನಿಂದ ದೈವಾಂಶ ಸಂಭೂತರಾದವರು ಜನ್ಮ ಪಡೆಯುತ್ತಾರೆ. ಅವರು ದಾಯಾದಿ ದ್ವೇಷಕ್ಕೆ ಸಿಕ್ಕಿ ರಾಜ್ಯ ಭ್ರಷ್ಟರಾಗಿ ವನವಾಸ ಮಾಡಬೇಕಾದ ಸಂದರ್ಭ ಬರುತ್ತದೆ. ಆ ವನವಾಸದ ಕಾಲದಲ್ಲಿ–ಘಟಸರ್ಪವಾದ ನೀನು-ಪಾಂಡವರಲ್ಲೊಬ್ಬನಾದ ಭೀಮಸೇನನೆಂಬಾತನನ್ನು ಹಿಡಿದುಕೊಳ್ಳುತ್ತಿ. ತಮ್ಮನನ್ನು ಬಿಡಿಸಿಕೊಳ್ಳಲು ಅಣ್ಣ–ಧರ್ಮರಾಜ–ಬರುತ್ತಾನೆ–ಆತ ನನ್ನು ನೀನು ಕೆಲವು ಚಿತ್ರವಿಚಿತ್ರವಾದ ಪ್ರಶ್ನೆಗಳನ್ನು ಕೇಳುತ್ತಿ. ಅವೆಲ್ಲಕ್ಕೂ ಆತ ಸೂಕ್ತವಾದ ಉತ್ತರಗಳನ್ನು ಕೊಡುತ್ತಾನೆ. ಆಗ ಆ ಧರ್ಮಮೂರ್ತಿಯ ದರ್ಶನ ಹಾಗೂ ವಾಕ್‌ಸುಧಾಶ್ರವಣಯೋಗ ನಿನಗೆ ದೊರೆಯುತ್ತದೆ. ತತ್ಪರಿಣಾಮವಾಗಿ ಭೀಮನಿಗೆ ಬಿಡುಗಡೆ ಹಾಗೂ ನಿನಗೆ ಶಾಪನಿವಾರಣೆ ಯಾಗುತ್ತದೆ–ಎಂದು ಅಗಸ್ತ್ಯರು ಹೇಳಿ ಹೋದರು.

ಮಹರ್ಷಿಗಳ ಮಾತು ಎಂದೂ ಸುಳ್ಳಾಗುವುದಿಲ್ಲ. ನಾನು ಘಟಸರ್ಪದ ರೂಪಿನಲ್ಲಿ ಕಾಮ್ಯಕವೆಂಬ ಕಾಡಿನಲ್ಲಿ ಬಿದ್ದಿದ್ದೆ–ಬಹುಕಾಲ ಹೀಗೇ ಕಳೆಯಿತು: ಪಾಂಡವ ಕೌರವರು ಒಂದು ಮನೆಯ ಜನ. ಅನ್ಯೋನ್ಯವಾಗಿ ಬೆಳೆಯಬೇಕಾಗಿದ್ದ ಅಣ್ಣತಮ್ಮಂದಿರು. ಆದರೆ ಶಕುನಿಯ ಕುತಂತ್ರದಿಂದಾಗಿ ಅವರಿಗೆ ದ್ವೇಷ ಬೆಳೆಯಿತು. ಸಜ್ಜನರಾದ ಪಾಂಡವರನ್ನು ಕೌರವರು ಪಗಡೆಯಾಟದಲ್ಲಿ ಸೋಲಿಸಿ ಅವರ ರಾಜ್ಯವನ್ನು ಕಸಿದು ಕೊಂಡು–ಅವರನ್ನು ಕಾಡಿಗಟ್ಟಿದರು. ಅವರು ಅಲ್ಲಲ್ಲಿ ಅಲೆದಾಡುತ್ತ ಬೃಹದಶ್ವನೆಂಬಾತನಿದ್ದ ಆಶ್ರಮದತ್ತ ಬಂದರು. ಅದೇ ಕಾಮ್ಯಕವನ. ಅದೊಂದು ಘೋರಾಟವಿ. ಕ್ರೂರಮೃಗಗಳ ನಿವಾಸಸ್ಥಾನವಾಗಿತ್ತು. ಅಲ್ಲಿ ಒಂದು ಒಂದುದಿನ ಪರಮ ಪರಾಕ್ರಮಶಾಲಿಯಾದ ಭೀಮಸೇನ ಬೇಟೆಯಾಡುತ್ತ ಬಂದ. ಆತನ ಗದಾಘಾತಕ್ಕೆ ಸಿಂಹಶಾರ್ದೂಲಗಳು ತತ್ತರಿಸಿ ಸತ್ತವು. ಪದಾಘಾತಕ್ಕೆ ಹೆಮ್ಮರಗಳು

ರುಳಿ ಬಿದ್ದವು. ಭೀಮಸೇನದ ರುದ್ರಭೀಕರ ಆರ್ಭಟಕ್ಕೆ ಯಾವುದೋ ಪೊದೆಯಲ್ಲಿ ಬಿದ್ದಿದ್ದ ನನಗೆ ಎಚ್ಚರವಾಯ್ತು. ಸರ್ಪಗಳಿಗೆ ನಿದ್ದೆ ಹೆಚ್ಚು–ಅದು ಲೋಕೋಪಕಾರದ ದೃಷ್ಟಿಯಿಂದ ಭಗವಂತ ಮಾಡಿದ ತಂತ್ರವಿರಬಹುದು. ಘುಡುಘುಡಿಸಿ ಬಂದ ಭೀಮಸೇನನ ಕಾಲುಗಳಿಗೆ ನಾನು ಸುತ್ತಿ ಹಾಕಿ ಹಿಡಿದು ಬಿಟ್ಟೆ. ಆತ ನನ್ನನ್ನು ಕೀಳ ಬಗೆದ. ಇಮ್ಮಡಿ ರೋಷದಿಂದ ಆತನನ್ನು ಪುನಃ ಹಿಡಿದೆ. ನನ್ನ ಬಂಧನದಲ್ಲಿ–ಗಿಳಿಯಂದದಲಿ ಗಿರಿಗಿರಿಗುಟ್ಟಿದನು ಭೀಮ!! ಬಿಡಿಸಿಕೊಳ್ಳಲು ಆತನಿಗೆ ಸಾಧ್ಯವಾಗಲಿಲ್ಲ. ಆತನ ಸತ್ತ್ವಕುಗ್ಗಿತು. ಕಂಠಗದ್ಗದವಾಯ್ತು. ಕಣ್ಣಾಲಿಗಳು ತಿರುಗಿ ಹೋದವು. ಉಸುಗಟ್ಟಲಾರಂಭಿಸಿದ – ಕೈಸೋತುಹೋಯ್ತು. ಹಿಡಿದಗದೆ ಆ ಕಡೆ ಬಿದ್ದುಹೋಯ್ತು.

ಅಷ್ಟರಲ್ಲಿ ತಮ್ಮನೇನಾದನೋ–ಎಂದು ಧರ್ಮರಾಜ ಹುಡುಕಿಕೊಂಡು ಬಂದ. ಹಾವಿನ ತೆಕ್ಕೆಯಲ್ಲಿ ಸಿಕ್ಕಿಕೊಂಡು ಕಣ್‌ಕಣ್ ಬಿಡುತ್ತಿರುವ ಭೀಮನನ್ನು ಕಂಡು ಆತನಿಗಾಶ್ಚರ್ಯವಾಯ್ತು. ಜಟಾಸುರ–ಹಿಡಿಂಬ–ಬಕಾಸುರಾದಿ ರಾಕ್ಷಸರನ್ನು ಸದೆಬಡಿದ ಪೌರುಷವಂತ ಹಾವಿನ ಹಿಡಿತಕ್ಕೆ ಸಿಕ್ಕಿಬಿದ್ದು–ಬಿಡಿಸಿ ಕೊಳ್ಳಲಾರದೆ ತಿಣಿಕಾಡುತ್ತಿರುವುದನ್ನು ಕಂಡು ನಿಜಕ್ಕೂ ಸೋಜಿಗವೆನಿಸಿತು. ಕೆಲಸಕ್ಕೆ ಬಾರದ ಸರ್ಪವೆಲ್ಲಿ! ಭೀಮನ ಭೀಮ ಪರಾಕ್ರಮವೆಲ್ಲಿ!! ಅವನ ತುಳಿತಕ್ಕೆ ಹತ್ತಾರು ಸರ್ಪಗಳು ಸತ್ತಾವು. ಆದರೆ ಇದೇನಾಶ್ಚರ್ಯ. ಹಾವಿನ ಬಿಗಿತಕ್ಕೆ ತಲ್ಲಣಿಸಿ ಹೋಗಿದ್ದಾನೆ–ಎಂದು ಧರ್ಮಜನಿಗೆ ಸೋಜಿಗವಾಯ್ತು. ನಾನವನ ಕಂಠಕ್ಕೆ ಉರುಲು ಹಾಕಿದಂತೆ ಬಲವಾಗಿ ಹಿಡಿದಿದ್ದೆ–ಮಾತನಾಡಲೂ ಸಹ ಅವಕಾಶವಿಲ್ಲದಂತೆ ದಯನೀಯ ದೃಷ್ಟಿಯಿಂದ ಅಣ್ಣನತ್ತ ಪಿಳಿಪಿಳಿನೋಡಿದ ಭೀಮಸೇನ–ಕೈಸನ್ನೆಮಾಡಿ ಕೇಳಿಕೊಂಡ–ಏನಾದರೂ ಮಾಡಿ ನನ್ನನ್ನು ರಕ್ಷಿಸು–ಎಂದು!!

ಆಗ ಧರ್ಮರಾಜ – ನೀನಾರು ಸತ್ಯಹೇಳು, ಸಾಮಾನ್ಯ ಸರ್ಪವಂತೂ ಅಲ್ಲವೆಂದೇ ಕಾಣುತ್ತಿದೆ. ನನ್ನ ತಮ್ಮ ನಿನಗೇನು ತೊಂದರೆಮಾಡಿದ? ನೀನು ದನುಜನೋ–ಗಂಧರ್ವನೋ – ಸರೀಸೃಪವೇಷದ ದಿವಿಜೇಂದ್ರನೋ? – ಎಂದು ಅಂಗಲಾಚಿ ಕೇಳಿಕೊಂಡ. ತನ್ನ ಪರಿಚಯವನ್ನು ತಿಳಿಸಿದ. ಆಗ ನನಗೆ ಆಗಸ್ತ್ಯರಾಡಿದ್ದ ಮಾತು ನೆನಪಿಗೆ ಬಂತು. ನಾನು ಕೇಳುವ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರ ನೀಡಬೇಕು. ನೀನು ಹೇಳುವ ಉತ್ತರ ಧರ್ಮಸಮ್ಮತವಾಗಿರಬೇಕು. ಶಾಸ್ತ್ರ ಸಮ್ಮತವಾಗಿರಬೇಕು. ಇಷ್ಟಾದ ಹೊರತು ನಿನ್ನ ತಮ್ಮನ ಜೀವ ಉಳಿಯಲಾರದು ಜೋಕೆ – ಎಂದು ಎಚ್ಚರಿಕೆ ನೀಡಿದೆ. ನನ್ನ ಮಾತು ಕೇಳಿ ಧರ್ಮರಾಜನಿಗೆ ಆಶ್ಚರ್ಯವಾಗಿರಬೇಕು. ಇದೇನು ಪ್ರಶ್ನೆ – ಇದೇನುತ್ತರ!! ಈ ಪ್ರಶ್ನೋತ್ತರಕ್ಕೂ ಭೀಮಸೇನನನ್ನು ಬಿಡುವುದಕ್ಕೂ ಸಂಬಂಧವೇನು? ಇದೇನು ವಿಚಿತ್ರವೊ!! ಎಂದು ಭಾವಿಸಿ–ಸಹಜ ವಿನಯದಿಂದ–ಏನಾದರೂ ಕೇಳು–ನನಗೆ ತೋಚಿದಷ್ಟು ಉತ್ತರ ಹೇಳುತ್ತೇನೆ–ನನ್ನ ಮಾತು ಧರ್ಮಸಮತವಾಗಿರುತ್ತದೆ. ಶಾಸ್ತ್ರ ಸಮ್ಮತವಲ್ಲದ – ಧರ್ಮ ಸಮ್ಮತವಲ್ಲದ ಮಾತು ನನ್ನ ಬಾಯಿಂದ ಇದುವರೆಗೆ ಬಂದಿಲ್ಲ–ಮುಂದೆಯೂ ಬರುವುದಿಲ್ಲ. ಅನೃತವಾಡಿ ಅರಿಯದು ನನ್ನ ಜಿಹ್ವೆ–ಎಂದ-

ನಾನೇನು ಪ್ರಶ್ನೆ ಕೇಳಿದೆನೋ – ಧರ್ಮರಾಜನೇನು ಉತ್ತರ ಕೊಟ್ಟನೋ ಎಂದು ನಿಮ್ಮ ಮನಸ್ಸಿನಲ್ಲಿ ಕುತೂಹಲದಲೆಗಳೇಳುತ್ತದೆಯಲ್ಲವೇ? ಅದೊಂದು ವಿಚಿತ್ರ ಕಥೆ–ಹೇಳುತ್ತೇನೆ–ಕೇಳಿ.

ಧೀರನಾರು–ಎಂದು ಕೇಳಿದೆ. ಆತ ಏನುತ್ತರ ಕೊಟ್ಟ ಗೊತ್ತೇ? ನಾರಿಯರ ಕಡೆಗಣ್ಣ ಹೊಯಿಲಿನ ಧಾರೆಗಳುಕದವನೇ ಧೀರ.

ಎಲ್ಲಕ್ಕಿಂತ ಕಷ್ಟವಾದ ಕೆಲಸವಾವುದು–ಎಂದೆ. ಮನೋ ನಿಗ್ರಹ–ಎಂದುತ್ತರ ಕೊಟ್ಟ.

ಮೂರು ಲೋಕವನ್ನು ಗೆಲ್ಲುವ ಸಾಮರ್ಥ್ಯವುಳ್ಳದ್ದಾವುದು–ಎಂದಾಗ–ಸತ್ಯ ಮತ್ತು ಮೃದುನುಡಿ–ಎಂದುತ್ತರ ಕೊಟ್ಟ.

ಅತ್ಯಂತ ಕ್ರೂರಮೃಗಯಾವುದು – ಎಂದಾಗ ಕೃತಘ್ನ ವ್ಯಕ್ತಿ–ಎಂದ.

ಲೋಕಕ್ಷೇಮ ಯಾವುದರಿಂದಾಗುತ್ತದೆ–ಎಂಬ ನನ್ನ ಪ್ರಶ್ನೆಗೆ ಆತ ಏನುತ್ತರ ಕೊಟ್ಟಗೊತ್ತೇ?– ಸಜ್ಜನರ ಬುದ್ಧಿಬಲ ಮತ್ತು ಬಲಿಷ್ಟರಬಾಹುಬಲ ಎರಡೂ ಬಂದಾಗಿ ಕೆಲಸಮಾಡಿದಾಗ ಮಾತ್ರ ಲೋಕಕ್ಷೇಮ–ಎಂದ.

ಜಗತ್ತಿನಲ್ಲಿ ಸನ್ಮಾನನೀಯ ವ್ಯಕ್ತಿಯಾರು–ಎಂದೆ.

ಗರ್ವಪಡದುಪಕಾರಿ – ದರ್ಪಬಿಟ್ಟಧಿಕಾರಿ – ಎಂದುತ್ತರ ಕೊಟ್ಟ. ಧರ್ಮರಾಜನ ಒಂದೊಂದು ಮಾತಿನಲ್ಲೂ ಅಪಾರ ಲೋಕಾನುಭವತುಂಬಿತ್ತು. ಶಾಸ್ತ್ರಜ್ಞಾನ ತುಂಬಿತ್ತು. ನಾನೆಂತಹ ಕ್ಲಿಷ್ಟವಾದ ಪ್ರಶ್ನೆ ಹಾಕಿದರೂ ಆತ ಅಷ್ಟೇ ಲೀಲಾಜಾಲವಾಗಿ ಉತ್ತರಿಸುತ್ತಿದ್ದ. ಆತನ ಪಾಂಡಿತ್ಯಕ್ಕೂ, ಸಮಯಸ್ಫೂರ್ತಿಗೂ ಧರ್ಮಾಭಿಮಾನಕ್ಕೂ – ಪ್ರತಿಭೆಗೂ ನಾನೂ ಆಶ್ಚರ್ಯಚಕಿತನಾಗಿ ಹೋದೆ. ನನ್ನ ವಂಶದಲ್ಲಿಂತಹ ಧರ್ಮಮೂರ್ತಿ ಅವತರಿಸಿದ– ಎಂದು ಹಿಗ್ಗಿಹೋದೆ. ನನಗೂ ಧರ್ಮರಾಜನಿಗೂ ನಡೆದ ಪ್ರಶ್ನೋತ್ತರ–ಸಂಭಾಷಣೆ – ಎಲ್ಲವನ್ನೂ ವಿಶದವಾಗಿ ಬರೆದರೆ ಅದೊಂದು ಗ್ರಂಥವಾದೀತು. ಮಾದರಿಗಾಗಿ ಕೆಲವು ಅಂಶಗಳನ್ನು ಹೇಳಿದೆ ಅಷ್ಟೆ. ಮಹಾತ್ಮರ ಮಾತೇ ಉಳಿದವರಿಗೊಂದು ಉಪದೇಶ. ಧರ್ಮರಾಜನ ಅಭಿಪ್ರಾಯಗಳೇ ಜಗತ್ತಿಗೆ ದಾರಿದೀಪ.

ಆತ ಹೇಳಿದ ಮಾತುಗಳು – ಕೇವಲ ಉತ್ತರವಾಗಿರಲಿಲ್ಲ. ಮುತ್ತುಗಳಾಗಿದ್ದವು. ಮಾಣಿಕ್ಯಗಳಾಗಿದ್ದವು. ಸೂತ್ರವಾಕ್ಯಗಳಾಗಿದ್ದವು. ಲೋಕದ ಯಾವದೇಶದವರಿಗಾದರೂ–ಯಾವ ಕಾಲದವರಿಗಾದರೂ-ಮಾರ್ಗದರ್ಶಕ ತತ್ತ್ವವಾಗಿದ್ದವು. ಭಾರತೀಯ ಸಂಸ್ಕೃತಿಯ ರಸಖಂಡಗಳಾಗಿದ್ದವು. ಧರ್ಮರಾಜನು ಕೊಟ್ಟ ಉತ್ತರಗಳು ನನ್ನ ಮನಸ್ಸಿಗೆ ಸರಿದೋರಿದುವು–ಏಕೆಂದರೆ ಅವುಶಾಸ್ತ್ರ ಸಮ್ಮತವಾಗಿದ್ದವು. ಆಗ ನಾನಾಡಿದ ಮಾತಿನಂತೆ ಭೀಮನನ್ನು ಬಿಡುಗಡೆ ಮಾಡಿದೆ. ಪುಣ್ಯ ಪುರುಷನ ಸಂದರ್ಶನದಿಂದ ನನ್ನ ಜನ್ಮ ಪಾವನವಾಯ್ತು– ಆತನೊಡನೆ ಮಾತಾಡಿದ್ದರಿಂದ ನನ್ನ ಶಾಪ ವಿಮೋಚನೆಯಾಯ್ತು.

ಈಗ ನಿಮಗೊಂದು ಮಾತು ಹೇಳ ಬಯಸುತ್ತೇನೆ – ನನ್ನಂತೆ ನೀವೆಂದೂ ಗರ್ವಪಡಬೇಡಿ: ಗರ್ವಪಟ್ಟು ಶಾಪಕ್ಕೆ ಗುರಿಯಾಗ ಬೇಡಿ. ಈ ನಹುಷನ ಪ್ರಶ್ನೆಗಳನ್ನು ನೋಡಿ ಆಶ್ಚರ್ಯ ಪಡಬೇಡಿ– ಧರ್ಮ ಮೂರ್ತಿಯ ಉತ್ತರಗಳ ಗಾಂಭೀರ್ಯವನ್ನು ಆಲೋಚಿಸಿ ಆನಂದಿಸಿರಿ, ಧರ್ಮವು ನಿಮ್ಮನ್ನು ರಕ್ಷಿಸುತ್ತದೆ–ಆದರೆ ನೀವದನ್ನು ಮೊದಲು ರಕ್ಷಿಸಬೇಕೆಂಬುದನ್ನು ಮರೆಯದಿರಿ. ನಿಮ್ಮ ಮಾರ್ಗ ಮಂಗಳ ಮಯವಾಗಲಿ, ನಿಮಗೆ ಶುಭವಾಗಲಿ.

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಟು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

–ತಿ. ತಿ. ದೇ.

## ಹರಿಹರ ಕವಿಯ

# ತಿರುನೀಲಕಂಠ

**ಶ್ರೀ ಕೆ. ರಮಾನಂದ**

ಮನಸ್ಸಿನ ಭಾವನೆಗಳನ್ನು ಮೀಟಿ ಓದುಗರನ್ನು ಶಿವಾನಂದ ಲಹರಿಯಲ್ಲಿ ತೇಲಿ–ಮುಳುಗುವಂತೆ ಮಾಡಬಲ್ಲ ಹರಿಹರ ಕವಿ 12–13 ನೇ ಶತಮಾನದಲ್ಲಿ ಜಡ ಸಂಪ್ರದಾಯದ ವಿರುದ್ಧ ಬಂಡೆದ್ದ ಕವಿಗಳಲ್ಲಿ ಮೊದಲಿಗನಾಗಿ, ವಚನ ಸಂಪ್ರದಾಯದ ಹಿನ್ನಲೆ ಪಡೆದು ಕ್ರಾಂತಿಕವಿಯೆನಿಸಿಕೊಂಡ. ಹರಿಹರದೇವನ ರಗಳೆಗಳಲ್ಲಿ ಭಕ್ತಿ, ತಾಂಡವ-ನೃತ್ಯವಾಡುವಂತೆ ತೋರುತ್ತದೆ. ಶ್ರದ್ಧೆ ಮತ್ತು ಪ್ರೇಮದ ಯೋಗವೇ ಭಕ್ತಿಯೆನ್ನಬಹುದು. ಆತ್ಮ ನಿವೇದನೆಯೇ ಭಕ್ತಿಯ ಪ್ರಮುಖ ಅಂಗ. ಹೆಚ್ ದೇವೀರಪ್ಪ ನವರ ಅಭಿಪ್ರಾಯದಂತೆ–ಹರಿಹರ ಭಕ್ತಿ ಪ್ರಪಂಚ ವಿಹಾರಿ. ಅವನ ಕಾವ್ಯಕಲೆ ಭಕ್ತಿಯ ಒಂದು ಉಪಾಸನಾ ಮಾರ್ಗ. ಅವನ ದೃಷ್ಟಿ ಅಖಿಲ ಭರತಖಂಡ ವ್ಯಾಪ್ತಿಯುಳ್ಳದ್ದು. ಭಕ್ತಿರಸಾವೇಶ ಭರಿತವಾದ ನಾಟಕೀಯ ಮಾಣಿಕ್ಯ ದೀಪ್ತಿಯಂತಿರುವ ರಮ್ಯತಮ ಶೈಲಿ ರಗಳೆಗಳಲ್ಲಿವೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯ, ಅನುಪಮ, ಅಸಾಧಾರಣ ಕೊಡುಗೆ ಈ ರಗಳೆಗಳೆನ್ನಬಹುದು. ಕಾಶ್ಮೀರದಿಂದ ರಾಮೇಶ್ವರದವರೆಗೆ ಶಿವಭಕ್ತರ ಕಥೆ ಆರಿಸಿಕೊಂಡ ಹರಿಹರ ಸಾತ್ತ್ವಿಕ, ರಾಜಸ, ತಾಮಸ ಮೊದಲಾದ ಭಕ್ತಿಸ್ವರೂಪಗಳನ್ನು ರಗಳೆಗಳಲ್ಲಿ ನಿರೂಪಿಸಿದ್ದಾನೆ. ಮುಖ್ಯವಾಗಿ ಸತಿ–ಪತಿ ಭಾವ, ದಾಸ್ಯ ರಸ ನಿಧಿಯಾದ ಸ್ವಾಮಿ–ಭೃತ್ಯಭಾವ ಇಲ್ಲಿ ಮೂಡಿವೆ. ಕನ್ನಡ ಕಲಾಸಿದ್ಧಿಯ ರನ್ನಗಳಸಗಳೆಂದು ಈ ರಗಳೆಗಳನ್ನು ಕರೆಯಬಹುದು.

ಹರಿಹರ – ತಿರುನೀಲಕಂಠರ – ರಗಳೆಯ ಕಥೆಯನ್ನು 63 ಪುರಾತನರ ಕಥೆಗಳಿಂದ ತೆಗೆದು ಕೊಂಡಿದ್ದಾನೆ. "ಧರಾತಳಕೆ ಒಪ್ಪಿರುವ ಚೋಳದೇಶದ – ಪೊನ್ನಾಂಬಲದ" ಶಿವಭಕ್ತಿಯ ಸಾಕಾರ ಮೂರ್ತಿಗಳು 'ತಿರುನೀಲಕಂಠ' ಹಾಗೂ ಅವನ ಪತ್ನಿ 'ಮುತ್ತೈದೆ' ಆದರೆ–"ಪೆರಿಯಪುರಾಣದಲ್ಲಿ"–ಮುತ್ತೈದೆಯ ಹೆಸರು ಬರುವುದಿಲ್ಲ. ಆ ಪೊನ್ನಾಂಬಲವಾದರೋ ಶಿವನ ಸೊಂಪನ್ನೊಳಗೊಂಡಿದೆ– "ಎಸೆವ ಪುರದೊಳಗೆಲ್ಲ ಹರಮಯ ಶಿವಮಯಂ, ಎಸೆವ ಕೇರಿಗಳೊಳಗೆ ಶಿವನ ಭಕ್ತರಮಯಂ, ಶಿವನ ಪೂಜಾ ಸಂಭ್ರಮಂ ಮನೆಗಳೊಳಗೆ, ಭವನ ಕಾಲಂದಿಗೆಯ ಧ್ವನಿ ಮನೆಮನೆಯೊಳಗೆ" – ಹರಿಹರನ ಶಿವದೃಷ್ಟಿಕೋನವಿಲ್ಲಿ ಅನ್ವಯವಾಗುತ್ತದೆ.

ತಿರುನೀಲಕಂಠನ ಪಾತ್ರವನ್ನೇ ಶಿವಮಯವಾಗಿ ಕಡೆದು ನಿಲ್ಲಿಸಿದ್ದಾನೆ ಹರಿಹರ. ಆತ ನಿತ್ಯ ಲಿಂಗಾರ್ಚನೆ ಮಾಡುತ್ತಾನೆ. ಶಿವನಲ್ಲಿ ಆತ ಎಷ್ಟು ಭಾವಪರವಶನಾಗುತ್ತಾನೆಂದರೆ ಶಿವಪುರಾಣ ಕೇಳುತ್ತಾ, ನಯನಾಶ್ರು ಸುರಿಸುತ್ತಾ, ನುಡಿಗೊಮ್ಮೆ ಪುಳಕವೇರುತ್ತ, ಕೇಳುತ್ತ, ಕುಳ್ಳಿರುತ್ತ ಏಳುತ್ತ, ಕಣ್ಮುಚ್ಚಿ ಕರಗುತ್ತ, ಒಳಗೆ ಶಿವಮೂರ್ತಿಯನ್ನು ತಳೆದು ಮೆಲ್ಲಡಿಯಿಡುತ್ತಾ ಮುಂದೆ ಸಾಗುತ್ತಾನೆ.

ಭಗವಂತನ ಬಗ್ಗೆ ಪ್ರೇಮ ಭಕ್ತನಲ್ಲಿ ಹೇಗಿರುತ್ತದೆ? ಹೀಗೆ ಎಂದು ಚಿತ್ರಿಸಿಕೊಳ್ಳಬಹುದೆ!–ಹೂವಿನಿಂದೊಮ್ಮೆ, ಹೊಸ ಪುಳಕದಿಂದೊಮ್ಮೆ, ಭಾವದಿಂದೊಮ್ಮೆ, ಭರಿತಾಶ್ರುವಿಂದೊಮ್ಮೆ, ಮುದ, ಮುಗ್ಧತೆ, ಗದಗದುಕೆ, ದೈನ್ಯ, ದರಹಾಸ, ಮನವೇಗ–ಗಳಿಂದ ಶಿವನನ್ನು ನೋಡುತ್ತೆಯಾಡುತ್ತೆ ನಲಿದು ಲಲ್ಲೆಗರೆವುತ್ತಾನೆ ತಿರುನೀಲಕಂಠ.

ಆತನ ಮುಗ್ಧತೆ ಇಲ್ಲಿ ಹೀಗೆ ಮೂಡಿದೆ– ಏನಯ್ಯ, ಏನಭವ, ಏನೆನ್ನ ಮನದೊಲವೆ, ಏನೆನ್ನ ಪೊನ್ನಾಂಬಲದ ನಲವೆ, ಏನೆನ್ನ ಶಂಕರನೆ, ಶಶಿಧರನೆ, ಏನೆನ್ನ ಸುಖಮಯನೆ, ಅಮೃತಮಯನೆ – ಎಂದು ಕೊಂಡಾಡಿ ಬೋಳೈಸಿ ಹಾರೈಸುತಂ, ನಿಂದು ನೋಡುತ ಮತ್ತೆ ಮತ್ತೆ ಕೊಂಡಾಡುತಂ, ಪೊಗಲಾರದೆ ತಿರುಗಿ ತಿರುಗಿ ಪೊಡವಡವುತುಂ, ರಾಗದಿಂದಗ್ಗಿಸುತೆ ಹಿಗ್ಗಿ ಹೊರೆಯೇರುತಂ, ವಾಸ್ತವವನ್ನು ಅತಿಶಯಗೊಳಿಸುವ, ಭವವನ್ನು ಭಾವವಾಗಿಸುವ ಹರಿಹರನ ನಿಷ್ಣಾತ ಕಲೆ ಇಲ್ಲಿ ಹೀಗೆ ಮೂಡಿದೆ. ನೀರಿನ ಒರತೆಯೊಂದು ಮೆಲ್ಲಮೆಲ್ಲನೆ ಜಿನುಗಿ ಮುಂದೆ ದೊಡ್ಡ ಮಡುವಾಗುವಂತೆ, ಭಕ್ತಿಯ ಒರತೆ ಇಲ್ಲಿ ಚಿಮ್ಮತೊಡಗಿದೆ. ಎಲ್ಲೂ ಬೇಸರವಿಲ್ಲದೆ, ಹೇಳಿದ್ದನ್ನೆ ತಾಳ್ಮೆಯಿಂದ ಹೇಳಬಲ್ಲ ಕವಿ.

ತಿರುನೀಲಕಂಠನ ಭಕ್ತಿಯಾದರೂ ಎಂತಹ ಉತ್ಕಟವಾದುದು! ಮಧ್ಯರಾತ್ರಿ ನರ್ತಕಿಯ ದಾಸಿ, ಇವನ ಮೇಲೆ ನೀರು ಚೆಲ್ಲಿದಾಗಲೂ ಈತ " ತಿರುನೀಲಕಂಠಾ " ಎಂದು ಈಶ್ವರನನ್ನು ಧ್ಯಾನಿಸುವ. ಆಕೆ ದಾಸಿಮಾಡಿದ ತಪ್ಪರಿತು–ದೇವ ಮನೆಗೆ ದಯಮಾಡಿಸಿ – ಎಂದು ಕರೆದುಕೊಂಡು ಹೋಗಿ ಪರಿಮಳೋದಕದಿಂದ ಮಜ್ಜನ ಮಾಡಿಸಿ, ಶ್ರೇಷ್ಠ ದುಕೂಲವುಡಿಸಿ, ದಿವ್ಯ ಗಂಧ ಲೇಪಿಸಿ, ಕರ್ಪೂರವೀಳೆಯನಿತ್ತು ಕಳೆಸಲು, ಈತ–ಮನೆಗೆ ಬಂದಾಗ–ಪರಿಮಳದಿಂದ ಎಂದಿನಂತಿಲ್ಲದೆ ನವೀನವಾಗಿರುವ ಗಂಡನನ್ನು ಕಂಡು ಹದಿ ಹರೆಯದ ಮುತ್ತೈದೆ ಸಿಡಿಮಿಡಿಗೊಂಡರೂ ಆದರಿಸುತ್ತಾಳೆ. ಆತ ಮಲಗುವ ಸಮಯದಲ್ಲಿ ಮೈಮುಟ್ಟ ಬಂದಾಗ–'ಮುಟ್ಟಿದೊಡೆ ಶಿವನಾಣೆ'–ಎಂದು ಕೈಯಂ ನೂಂಕಿದಳು. 'ಆಣೆಯೆಂಬಲಗಿ ನೇರಾಗಲಾತನ ಕಿವಿ ಹೊಕ್ಕಿತು.' ಆಣೆಯಿಬ್ಬರ ದೇಹದೊಳು ಪೊಕ್ಕು ಬೆಳೆಬೆಳೆದು ಆ… ಯಾದರ್ಪರಮ ಶಿವನಾಜ್ಞೆಯಂ ತಳೆದು ತಮ್ಮೊಳೇನಾದೊಡರ್ವರಂ ಸೋಂಕದೆ–ಯಾರಿಗೂ ಅರಿಯದಂತೆ ಗುಪ್ತ ಶಿವಭಕ್ತರಾಗಿರುವ ಇವರ ಭಕ್ತಿ ಸ್ವರೂಪದ ಎಷ್ಟು ವಿಚಿತ್ರವಾದುದು!

ಹೀಗೆ ಇರಲು–"ಆಣೆ ಪಕ್ವಕ್ಕೆ ಬಂದಂ… ಬಂದುದು ಮುಪ್ಪು ಅವರಿಬ್ಬರಿಗೂ". ಆ… ಗುಪ್ತವೇಷಧರಿಸಿ ಪಾತ್ರೆಯನ್ನವರ ಮ… ಯಲ್ಲಿಟ್ಟು–ತಾನೇ ಅದನ್ನು ಮಾಯಮಾ… ಡುವ ಶಿವ–ಪಾತ್ರೆ ಕದ್ದ ಅಪಾದನೆಯ ಮೇ…

ಅವರಿಬ್ಬರನ್ನೂ ಮೂವಾಯಿಲರ ಮುಂದೆ ನಿಲ್ಲಿಸುತ್ತಾನೆ. ಮೂವಾಯಿಲರಾದರೋ-ಹರಪೂಜೆ, ಹಸ್ತ, ಕರಣ, ಚಿತ್ತ, ಚಿತ್ತ, ಮನ, ಜಿಹ್ವೆಯಲ್ಲಿ ತುಂಬಿಕೊಂಡು ಶಿವ ಕೀರ್ತಿ ಕಿವಿಗೆ ಕುಸುಮಾಭರಣವಾದವರು, ಶಿವಮೂರ್ತಿ ಕಂಗಳಲಿ ಬರೆದಂತಿಪ್ಪರು, ಶಿವ ಗೋಷ್ಠಿಯೊಳು ನಲಿದು ಸುಖಿಸುತ್ತಾ-ಇದ್ದರು. ಒಡಲು, ಆಯು, ಉಸಿರುವ್ಪುದಾ ಪಾತ್ರೆ ತವನಿಧಿಯಾ ಪಾತ್ರೆ - ಎಂದು ಶಿವ ಪಾತ್ರೆಗಾಗಿ ಬಯಕೆಪಡಲು, 'ತಾವು ಕದ್ದಿಲ್ಲ ವೆಂದು, ಇವರ ನಿಜವನ್ನು ಹೇಳಿದರೂ, ಆ ಗೊರವನ ಉಪಟಳ ಹೆಚ್ಚಾಯಿತು. "ಪಾತ್ರೆಯನ್ನಪಹರಿಸಿಲ್ಲವೆಂದು ಈ ಸತ್ಯ ವ್ರತ ಸದ್ಭಕ್ತರು ನುಡಿಯುವರಲ್ಲ-ಹಾಗಾದ ರೀತ ಪಾತ್ರೆ ತೆಗೆದು ಕೊಂಡಿಲ್ಲ ಎಂದು ತನ್ನ ಪತ್ನಿಯ ಕೈಯನ್ನು ಹಿಡಿದು ಕೊಂಡು ಈ ಹೊಂಡದಲ್ಲಿ ಮುಳುಗಲಿ, ನನಗೆ ಪಾತ್ರೆ ಬಂದಂತೆ" ಎಂದನು ಕಪಟ ವೇಷಧಾರಿ. ಡಂಬನೆಂದೆನಿಸಲಾರೆಂ, ಶಿವನೆ, ನಿನ್ನಾಜ್ಞೆ ಮೀರಲಾರ್ಪೆನೆ, ಹರನೆ, ತೋರುವನೆ, ಬೀರು ವೆನ ಎನ್ನೊಡೆಯನಾಜ್ಞೆಯಂ, ಪಿಡಿಯೆ ನನ್ನಯ ಸತಿಯ ಕೈಯನೇನಾದೊಡೆಂ, ಪಿಡಿಯೆನೀಧರೆ ಮೇಲೆ ಕೆಡೆದಡಂ, ಸತ್ತಡಂ-ಎಂದ ತಿರುನೀಲಕಂಠನಲ್ಲಿ ಖಚಿತ ನಿಲುವಿದೆ. ಶಿವನಾಣೆಗೆ ಇಷ್ಟು ಬೆಲೆಕೊಡುವ ಆತನಲ್ಲಿ ಭಕ್ತಿವಂತನ ಭಕ್ತಿಯ ಪಾರಮ್ಯವಿದೆ.

ಶಿವನೇ ಸೋಲುವ ಪರಿಸ್ಥಿತಿ ಬಂದಿತು. "ಭುವನಕ್ಕೆ ಹೊಸತು ನಿಮ್ಮಿಬ್ಬರಿರಿವಯ್ಯ" ಎಂದ ಗೊರವ-"ಕೋಲು ತುದಿಯಂ ಪಿಡಿದು ನೀರಲ್ಲಿ ಅವರನ್ನು ಮುಳುಗುವಂತೆ" ಕೋರಿದ. ಏಕೆಂದರೆ "ಸಾಲ್ವುದಿನ್ನಿವರಂ ನಿರೋಧಿಸಲೇಕೆಂದು, ಸೋಲ್ವರಂತಿಲ್ಲಿವರು ನಿಷ್ಠೆವುಳ್ಳವರಂದು ಶಿವ ಅರಿತ. "ಇರಿಸಿದರಿ ವರು ಪಾತ್ರೆಯಂ, ಕೊಳ್ಳೆನಾವುದಂ, ಹರ ನೀನೆ ಬಲ್ಲೆ ತಾನೇನಾದುದೆಂಬದರೆ" ಎಂದು ತಿರುನೀಲಕಂಠ, ಮುತ್ತೈದೆ ಕೋಲು ಹಿಡಿದು ನೀರಿನಲ್ಲಿ ಮುಳುಗಿದರು. ಪ್ರೀತಿಯ ಭಕ್ತಿಗೆ ಜಸುದೊರಕಿತು. ಆಗ ಆಶ್ಚರ್ಯವೆಂಬಂತೆ ಮುನ್ನಿನಂದದೊಳೆ ಹದಿನಾರರ ಹರೆಯ ಬಂದು, ಮುನ್ನಿಂಪನೂರ್ಮಡಿ ವಿಳಾಸ ವಾಯಿತು ದಂಪತಿಗಳಿಗೆ ಓ!-ಗೊರವ... ತೊಳತೊಳಗುವ ಜಡೆ, ಚಂದ್ರಕಳೆ, ನೊಸಲ ಕಣ್ಣಾಲಿ ಕುಂಡಲಂ, ಪುಲಿದೊವಲ, ಅಕ್ಷ ಮಾಲೆ ಮುಖಮಂಡಲ, ಕರನೊಪ್ಪಿ ರವಿ ಕೋಟಿ ತೇಜಮಂ, ಮುಸಳಿಸುವ ಜಗದ ದೇವ ಶಿವನಾದ.ಎಲ್ಲರಿಗೂ ಶಿವ ಸಾಕ್ಷಾತ್ಕಾರ ವಾಯಿತು. "ದೇವ ಈ ಒಡಲೊಳಿದ್ದೆನ್ನ ಮನ ವರಿವರೇ ಎಂದು ನಮಸ್ಕರಿಸಿ – ಇನಿತು ಬೇಗಂ ನುಡಿದು, ಜಡಿದು, ನೊಂದ್ಯೆ ತಂದೆ, ಇನಿತು ಬೇಗಂ ಮುಟ್ಟೆ ಮುಟ್ಟೆ ನೊಂದ್ಯೆ ತಂದೆ-ಎಂದು ತಿರುನೀಲಕಂಠ ಚಿಂತಿಸಿದ.

ಭಕ್ತನ ಅನುಕಂಪೆಯಿಲ್ಲಿದೆ. ಭಕ್ತಿಯುಮಡು ಪೂರ್ಣವಾಯಿತು. ಮುಂದಿರ್ದ ತಿರುನೀಲ ಕಂಠನ ನೋಡುತ-ಆಣೆ ಬಿಟ್ಟುದುದಿನ್ನಿನಿತು ವತ್ಸರಂ ಸುಖದಿಂದಿರಿ ಎಂದು ಶಿವ ಆಶೀರ್ವದಿಸಿ, ಹಲವುದಿನಗಳ ನಂತರ-"ಗಣಪದವಿಯೊಳಗವರನಾನಂದದಿಂದಿರಿ ಸಿದ".

ಹರಿಹರನ ಮುಪ್ಪಿನ ಚಿತ್ರಣವಿಲ್ಲಿ ಸುಂದ ರವಾಗಿದೆ. ಭಕ್ತರ ಭಕ್ತಿ ಅಚಲವಾದುದು. ನಿಜವಾದ ಭಕ್ತಿಯನ್ನು ಬಹಿರಂಗಪಡಿಸು ತ್ತಾನೆ ಶಿವ. ಹರಿಹರನಧೋರಣೆ ಮತ್ತು ಆಶಯದಲ್ಲಿ ಭಕ್ತಿ – ಸೂತ್ರರೂಪಗೊಂಡು ಸಫಲವಾಗಿದೆ. ಮನುಷ್ಯ ಸಂಬಂಧಗಳ, ಸಂವೇದನೆಗಳ ಸೂಕ್ಷ್ಮ ಚಿತ್ರಣವಿಲ್ಲಿ ಮೂಡಿದ್ದು ಕಾವ್ಯದ ದೃಷ್ಟಿ ಕೋನವೇ ಬದ ಲಾಗಿದೆ. ತಿರುನೀಲಕಂಠ-ಮುತ್ತೈದೆಯರ-'ನಿರ್ಲಿಪ್ತ ಸಂಬಂಧ' 'ಮಾನಸಿಕ ಆಘಾತ', ದೈಹಿಕ 'ವರ್ತನೆ', ಗ್ರಾಮವ್ಯವಸ್ಥೆಗಳ ನ್ನೊಳಗೊಂಡ, ಇದು ಸುಂದರ ನಾಟಕೀಯ ದೃಶ್ಯವಾಗಿದೆ. ಕನ್ನಡ ಸಾಹಿತ್ಯದ ಐಶ್ವರ್ಯ ಹೀಗೆ ಹರಿಹರನಿಂದ ಹೆಚ್ಚಾಯಿತೆಂದರೆ ತಪ್ಪಾಗಲಾರದು. ಹೀಗೆ "ತಿರುನೀಲಕಂಠರ ರಗಳೆಯಲ್ಲಿ" ಭಕ್ತಿಸ್ವರೂಪ ಸುಂದರ ವಾಗಿ ಮೂಡಿದೆಯೆನ್ನಬಹುದು.

ಒಟ್ಟಿನಲ್ಲಿ-"ಕಥನ ಕೌಶಲ, ಹಿತಮಿತ ವಾದ ವರ್ಣನೆ, ಸಹಜ ಕವಿತೆ, ಸರಳ ಭಾಷೆ, ಅಪಾರವಾದ ಶಬ್ದ ಸಂಪತ್ತು, ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲಿಯೂ ಪಾಂಡಿತ್ಯ ಪ್ರಭುತ್ವ-ಯಾವ ಅಳತೆಗೋಲಿ ನಿಂದ ಅಳೆದು ನೋಡಿದರೂ ಹರಿಹರ ನಿಸ್ಸಂಶಯ ವಾಗಿ ಕನ್ನಡದ ಮಹಾಕವಿ" ಎಂಬ ಕೆ. ವೆಂಕಟರಾಮಪ್ಪನವರ ಅಭಿಪ್ರಾಯ ಸೂಕ್ತವಾದುದು-"ಹರಿಹರ ನಿಜವಾಗಿಯೂ ಕನ್ನಡದ ರಗಳೆಯ ಮಹಾಕವಿ". ತಿರುನೀಲ ಕಂಠರಂತಹ ಮಹಾ ಶಿವಭಕ್ತರ ಕಥೆ ಪುಣ್ಯ ದಿನಗಳಲ್ಲಿ ಕೇಳಲು ಯೋಗ್ಯವಾದುದಾಗಿದೆ. ತಮಿಳು ನಾಡಿನಲ್ಲಿ ಪ್ರಚಲಿತವಿರುವ ಇವರ ಪುಣ್ಯ ಚರಿತ್ರೆ ಕರ್ನಾಟಕದಲ್ಲೂ ಹಬ್ಬಿ ಹೋಗಿದೆ.



# ರಾವಣೋ ಲೋಕರಾವಣಃ

ಭಾರತೀಯ ನಾಗರಿಕತೆಯು ಧರ್ಮಪ್ರಧಾನವಾದುದು. ವಿಶ್ವಕಲ್ಯಾಣವೇ ಅದರ ಪರಮ ಧ್ಯೇಯ. 'ಸರ್ವೇಜನಾಃ ಸುಖಿನೋ ಭವಂತು' 'ಸಮಸ್ತ ಸನ್ಮಂಗಳಾನಿ ಭವಂತು', 'ಲೋಕಾಃ ಸಮಸ್ತಾಃ ಸುಖಿನೋಭವಂತು'-ಎಂಬುದು ಅದರ ಅನವರತ ಚಿಂತನೆ. ಇದು ಸಾಧ್ಯವಾಗುವುದು ಧರ್ಮಪಾಲನೆಯಿಂದ ಮಾತ್ರ... ಆದಕ್ಕಾಗಿಯೇ 'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ, ಲೋಕ ಧರ್ಮಿಷ್ಠಂ ಪ್ರಜಾಃ ಉಪಸರ್ಪಂತಿ, ಧರ್ಮೇಣ ಪಾಪಮಪನುದತಿ, ಧರ್ಮೇ ಸರ್ವಂ ಪ್ರತಿಷ್ಠಿತಂ; ತಸ್ಮಾದ್ಧರ್ಮಂ ಪರಮಂ ವದಂತಿ' ಎಂದು ಉಪನಿಷತ್ತು ಘೋಷಿಸಿತು. 'ಧರ್ಮೋ ರಕ್ಷತಿ ರಕ್ಷಿತಃ' ಎಂಬುದು ರೂಢಿಗೂ ಅನುಭವಕ್ಕೂ ಬಂದಿತು.

ಹಾಗಾದರೆ ಈ ಧರ್ಮವೆಂಬ ಶಬ್ದಕ್ಕೆ ಅರ್ಥವೇನು? ಅನಾದಿಕಾಲದಿಂದ ಜಿಜ್ಞಾಸೆ ನಡೆದು ಸಂದರ್ಭಕ್ಕನುಗುಣವಾಗಿ ವಿವಿಧ ರೀತಿಯಲ್ಲಿ ಅದರ ಅರ್ಥವು ಸೂಚಿತವಾಗಿದೆ. ಆದರೂ ಅದರ ಅರ್ಥವು ಸರಳವೂ ಸುಲಭವೂ ಆದುದು. ಯಾವುದರಿಂದ ಈ ವಿಶ್ವವು ಧರಿಸಲ್ಪಟ್ಟಿದೆಯೋ, ಅಸ್ತಿತ್ವದಲ್ಲಿರುವುದಕ್ಕೆ ಸಾಧ್ಯವಾಗಿದೆಯೋ ಅದೇ ಧರ್ಮ. ಅದೂ ಅಷ್ಟು ಸ್ಪಷ್ಟವಾಗಿಲ್ಲ. ಇದಕ್ಕಿಂತಲೂ ಸರಳವಾದ ಅರ್ಥವನ್ನು ಈ ರೀತಿ ಸೂಚಿಸಬಹುದು. ಪ್ರಕೃತಿಗನುಗುಣವಾಗಿ ಲೋಕಕಲ್ಯಾಣಕ್ಕೆ ವಿರೋಧವಿಲ್ಲದಂತೆ ಆತ್ಮೋನ್ನತಿಗೆ ಸಹಾಯ ಮಾಡುವ ಕಾರ್ಯ ಧರ್ಮ. ಇದನ್ನೇ ಸಂಸ್ಕೃತಿಯೆಂದು ಕರೆದರೂ ತಪ್ಪಿಲ್ಲ. ಈ ಧರ್ಮವೆಂಬುದು ವಿಶ್ವದ ಎಲ್ಲ ಸ್ಥಾವರ ಜಂಗಮಾದಿಗಳಿಗೂ ಸಹಜವಾದುದು. ಅದನ್ನು ಹಾಗೆಯೇ ಬಿಟ್ಟರೆ ಲೋಕಕಲ್ಯಾಣಕ್ಕೆ ಯಾವ ಹಾನಿಯೂ ಉಂಟಾಗುವುದಿಲ್ಲ. ಮನುಷ್ಯನ ದೃಷ್ಟಿಯಿಂದ ಹೇಳುವುದಾದರೆ ಅಹಿಂಸಾ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ, ಸತ್ಯ, ಶಮದಮಾದಿ ಗುಣಗಳು ಸಹಜ ಧರ್ಮಗಳು. ಜಿತೇಂದ್ರಿಯತ್ವದಿಂದ ಈ ಸಹಜ ಧರ್ಮವನ್ನು ಕಾಪಾಡಿಕೊಂಡು ಬಂದರೆ ಲೋಕಕಲ್ಯಾಣಕ್ಕೆ ಸಹಾಯವಾಗುತ್ತದೆ. ಇಂದ್ರಿಯ ಜಯವಿಲ್ಲದಿದ್ದರೆ ಕಾಮಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳಿಂದ ಮೇಲೆ ತಿಳಿಸಿದ ಆತ್ಮಗುಣಗಳು ಮಾಯವಾಗಿ ವಿರೂಪವನ್ನು ಪಡೆದು ಲೋಕಶಾಂತಿಗೆ ಮಾರಕವಾಗುತ್ತದೆ. ವಿಶ್ವದ ಕಲ್ಯಾಣದ ಸಮತಾಸ್ಥಿತಿಗೆ ಏರುಪೇರುಂಟಾಗುವುದು, ಲೋಕದಲ್ಲಿ ಕ್ಷೋಭೆಯುಂಟಾಗುತ್ತದೆ. ಹೀಗಾಗದಂತೆ ಲೋಕಕಲ್ಯಾಣದ ಸಮಸ್ಥಿತಿಯನ್ನು ಕಾಪಾಡಿಕೊಂಡು ಬರುವುದೇ ಭಾರತೀಯ ಎಲ್ಲ ಸಾಹಿತ್ಯದ ಪರಮ ಗುರಿ.

ಈ ಧರ್ಮದ ಮೂಲರೂಪವನ್ನು ವೇದಗಳಲ್ಲಿ ಕಾಣಬಹುದು. ಅವು ಪ್ರಭು ಸಮ್ಮಿತಗಳಾದುದರಿಂದ ಲೋಕಕಲ್ಯಾಣದ ಸಮತಾಭಾವವನ್ನು ಉಳಿಸುವುದಕ್ಕೆ ಸಹಾಯಕವಾದ 'ಸತ್ಯಂವದ, ಧರ್ಮಂ ಚರ, ಸಹನಾವವತು, ಸಹನೌಭುನಕ್ತು, ಸಹ ವೀರ್ಯಂ ಕರವಾವಹೈ, ಮಾ ವಿದ್ವಿಷಾವಹೈ, ಶನ್ನೋ ಮಿತ್ರಶ್ಶಂವರುಣಃ, ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ದ್ಯೈವೀಸ್ವಸ್ತಿರಸ್ತುನಃ, ಸ್ವಸ್ತಿರ್ಮಾನುಷೇಭ್ಯಃ, ಶನ್ನೋ ಅಸ್ತು ದ್ವಿಪದೇ, ಶಂಚತುಷ್ಪದೇ– ಎಂಬ ಆಜ್ಞಾರೂಪವಾದ ಉಕ್ತಿಗಳು ಘೋಷಿಸಲ್ಪಟ್ಟವು. ವೇದೋಪಬೃಹ್ಮಣಕ್ಕಾಗಿಯೇ ಇತಿಹಾಸ ಪುರಾಣಗಳು ರಚಿತವಾದುವು. ಇವು ಮಿತ್ರಸಂಮಿತಗಳು. ಕಾವ್ಯಗುಣಗಳಿಂದ ಕೂಡಿದ ಕೆಲವು ಇತಿಹಾಸ ಪುರಾಣಗಳು ಕಾಂತಾ ಸಂಮಿತದಿಂದಲೂ ಮೂಲ ಧರ್ಮ ಸ್ವರೂಪವನ್ನು ವಿಶದಪಡಿಸುವುವು.

ಧರ್ಮವನ್ನು ಪಾಲಿಸುವವರು ದೇವತೆಗಳು, ಧರ್ಮಕ್ಕೆ ವಿರೋಧವಾದವರು ರಾಕ್ಷಸರು. ಅಂದರೆ ಸಹಜಗುಣವನ್ನು ಪಾಲಿಸುವವರು, ಅದಕ್ಕೆ ವಿರೋಧವಾಗಿ ನಡೆಯುವವರು. ಬೇರೊಂದು ರೀತಿಯಲ್ಲಿ ಹೇಳುವುದಾದರೆ ಲೋಕಕಲ್ಯಾಣಕ್ಕೆ ಸಹಾಯ ಮಾಡಿ ಅದರ ಸಮತಾಭಾವವನ್ನು ಉಳಿಸುವವರು, ಅದನ್ನು ವಿರೂಪಗೊಳಿಸುವವರು. ಸಮತಾಭಾವವನ್ನು ಉಳಿಸಬೇಕಾದರೆ ಅದನ್ನು ವಿರೂಪಗೊಳಿಸುವ ರಾಕ್ಷಸರನ್ನು ನಿರ್ಮೂಲಗೊಳಿಸಬೇಕು. ಇದು ದೇವತೆಗಳಿಂದ ಮಾತ್ರ ಸಾಧ್ಯ. ದೇವತೆಗಳು ವಾಸಮಾಡುವ ಭಾಗವೇ ಸ್ವರ್ಗ. ಅಸಮತೆಯನ್ನು ಅಸಹಜತೆಯನ್ನು ಹೋಗಲಾಡಿಸಬೇಕಾದರೆ ಅವರು ತಾವಿದ್ದ ಸ್ಥಳದಿಂದ ಕಲುಷಿತ ಸ್ಥಳಕ್ಕೆ ಇಳಿದು ಬರಬೇಕು. ಇಲ್ಲಿ ಅವರು ಜನರೊಂದಿಗೆ ಕಲೆತು ಅವರ ಹಾಗೆಯೇ ಕೆಲಸಮಾಡಿ ಸಹಜಸ್ಥಿತಿಯನ್ನು ಅವರಿಗೆ ತಿಳಿಸಿ ನಿಜಸ್ವರೂಪವನ್ನು ಅರಿವುಮಾಡಿಕೊಟ್ಟು ಸಾಧ್ಯವಾದಷ್ಟವರನ್ನು ಸಹಜಸ್ಥಿತಿಗೆ ತಂದು, ಆಗದವರನ್ನು ಸಂಹರಿಸಿ ಅವರಿಂದ ಲೋಕಕಲ್ಯಾಣಕ್ಕೆ ಉಂಟಾಗಿದ್ದ ಬಾಧೆಯನ್ನು ತಪ್ಪಿಸಿ ಯಥಾಸ್ಥಿತಿಯನ್ನು ಸ್ಥಾಪಿಸಬೇಕು. ಇದೇ ಅವತಾರ ರಹಸ್ಯ. ಈ ಕಾರ್ಯವನ್ನು ಮಾಡುವವರು ಅವತಾರ ಪುರುಷರು, ಅವರೇ ಲೋಕಪೂಜ್ಯರು, ಸರ್ವಕಾಲಕ್ಕೂ ಮಾನ್ಯರು.

ಡಾ|| ಎನ್. ಅನಂತರಂಗಾಚಾರ್

ವಾಲ್ಮೀಕಿ ಮಹರ್ಷಿಗಳಿಂದ ರಚಿತವಾದ ಶ್ರೀಮದ್ರಾಮಾಯಣವು ಇಂತಹ ಮಾರ್ಗದರ್ಶಕಗಳಲ್ಲಿ ಪ್ರಪ್ರಥಮವಾದುದು. ಇದರ ವಸ್ತುವನ್ನು ಅವರು ಮೂರು ಭಾಗದಲ್ಲಿ ಸೂಚಿಸಿದ್ದಾರೆ. ಮೊದಲು ಅದು ರಾಮಚರಿತಂ. ಎರಡನೆಯದಾಗಿ ಅದು ಸೀತಾಯಾಶ್ಚರಿತಂ ಮಹತ್, ಮೂರನೆಯದು ಪೌಲಸ್ತ್ಯವಧಂ. ರಾಮನು ವಿಗ್ರಹವಾನ್ ಧರ್ಮಃ – ಅವನು ಧರ್ಮದ ಸಾಕಾರಮೂರ್ತಿ, ಅವನು ಪ್ರದರ್ಶಿಸಿದ ಗುಣಗಳೆಲ್ಲ ಲೋಕಕಲ್ಯಾಣಕ್ಕೆ ಸಹಾಯಕವಾದುವು, ನಾರದರು ರಾಮನಲ್ಲಿ ಗುರುತಿಸಿರುವ ೧೬ ಗುಣಗಳು ಮನುಷ್ಯಸಾಮಾನ್ಯರಲ್ಲಿ ಇರಬೇಕಾದ ಸಹಜಗುಣಗಳು. ಇವನ್ನು ಪ್ರದರ್ಶಿಸಿ ಧರ್ಮದ ಸ್ವರೂಪವನ್ನು ತೋರಿಸಿ ಆದರ್ಶ ಮಾನವನಾಗಿದ್ದಾನೆ. ಧರ್ಮಕ್ಕೆ ಬರುವ ಆಘಾತವನ್ನೂ ಅದನ್ನು ರಕ್ಷಿಸುವುದರಲ್ಲಿ ಉಂಟಾಗುವ ಘೋರಯಾತನೆಯನ್ನೂ, ಅದನ್ನು ರಕ್ಷಿಸುವುದರಿಂದ ಲಭಿಸುವ ಅನಂತ ಸೌಖ್ಯವನ್ನೂ ಸೀತಾದೇವಿಯು ಪ್ರದರ್ಶಿಸಿ ಮಹತ್ತಾಗಿ ಲೋಕಕಲ್ಯಾಣಕ್ಕೆ ಸಹಾಯಮಾಡಿದ್ದಾಳೆ.

ಮೂರನೆಯ ಪೌಲಸ್ತ್ಯವಧೆಯ ಭಾಗದಿಂದ ಅಧರ್ಮದ ಸ್ವರೂಪವನ್ನೂ ಅದರ ಅನಿತ್ಯತೆಯನ್ನೂ ಧರ್ಮದಿಂದ ಅಧರ್ಮವು ನಾಶವಾಗುವುದೆಂಬ ತತ್ತ್ವವನ್ನು, ಧರ್ಮಸ್ಥಾಪನೆಯಾಗಬೇಕಾದರೆ ಅಧರ್ಮ ನಿರ್ಮೂಲಿತವಾಗಿಯೇ ತೀರಬೇಕೆಂಬ ಅಂಶವನ್ನೂ ದೃಢೀಕರಿಸಿದ್ದಾರೆ. ಈ ಅಭಿಪ್ರಾಯವನ್ನೇ ಭಗವದ್ಗೀತೆಯಲ್ಲಿ ಉಕ್ತವಾಗಿರುವ 'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ' ಎಂಬ ಭಗವದ್ವಾಕ್ಯವು ಸ್ಪಷ್ಟೀಕರಿಸುತ್ತದೆ.

ರಾಮಾಯಣದ ಕಾಲದಲ್ಲಿ ಧರ್ಮಕ್ಕೆ (ವಿಶ್ವಕಲ್ಯಾಣದ ಸಮತೆಗೆ), ಆಘಾತವಾಗಿತ್ತು, ಅಧರ್ಮ (ಲೋಕಕಲ್ಯಾಣಕ್ಕೆ ವಿರೋಧವಾದ ಸ್ಥಿತಿ) ಅತ್ಯಧಿಕವಾಗಿತ್ತು. ಅದಕ್ಕಾಗಿ ಧರ್ಮಮೂರ್ತಿಯಾದ ರಾಮನು ಅವತರಿಸಿ ಅಧರ್ಮದ ಪ್ರತೀಕವಾದ ರಾವಣನನ್ನೂ ಅವನ ಪರಿವಾರವನ್ನೂ ಸಂಹರಿಸಿ ಪುನಃ ಲೋಕಕಲ್ಯಾಣರೂಪವಾದ ಧರ್ಮಸ್ಥಾಪನೆಯನ್ನು ಮಾಡಿದನು.

ಈ ವಿಷಯ ಪ್ರತಿಪಾದನೆಯಲ್ಲಿ ರಾವಣನ ಪಾತ್ರವು ಬಹುಪ್ರಧಾನವಾದುದು, ರಾಮಾಯಣದ ಅರ್ಧಭಾಗಕ್ಕಿಂತ ಹೆಚ್ಚಾಗಿ ರಾವಣನ

ವಿಷಯವೇ ತುಂಬಿದೆ. ಅವನು ಅದ್ಭುತ ಶಕ್ತಿಯನ್ನು ಸಂಪಾದಿಸಿದ ವಿಷಯ, ಅದನ್ನು ದುರುಪಯೋಗ ಪಡಿಸಿಕೊಂಡು ಲೋಕರಾವಣನಾದ ರೀತಿ (ಲೋಕ ರಾವಣನೆಂದರೆ ವಿಶ್ವವನ್ನೇ ತನ್ನ ಹಿಂಸೆಯಿಂದ ಅರಚಿಕೊಳ್ಳುವಂತೆ ಮಾಡಿದವನು) ಅದರಿಂದ ಅವನಿಗಾದ ಅನಿವಾರ್ಯವಾದ ಅಧಃಪತನ ಇವನ್ನು ಆದಿಕವಿಗಳು ಬಹು ವಿವರವಾಗಿ ತಿಳಿಯಪಡಿಸಿದ್ದಾರೆ.

ರಾವಣನು ವೀರವಿಶ್ರವಸ್ಸಿನ ಮಗ. ಆದಿಕಾಲದಲ್ಲಿ ಬಹು ಜಿತೇಂದ್ರಿಯನಾಗಿದ್ದೂ, ದೀರ್ಘಕಾಲ ತಪಸ್ಸು ಮಾಡಿ ಇಂದ್ರಿಯಜಯದಿಂದ ಅದ್ಭುತ ಶಕ್ತಿಯನ್ನು ಸಂಪಾದಿಸಿದನು. ಅವನಿಗೆ ಯಾವ ವಿಧವಾದ ಕೊರತೆಯೂ ಇರಲಿಲ್ಲ. ಅವನ ಮರಣವಾದ ಮೇಲೆ ಅವನ ತಮ್ಮನಾದ ವಿಭೀಷಣನು ಅವನ ಸದ್ಗುಣಗಳನ್ನು ಸಾಮರ್ಥ್ಯವನ್ನು ಹೀಗೆಂದು ನೆನೆಸಿಕೊಳ್ಳುತ್ತಾನೆ: 'ಅವನು ವಿದ್ವಾಂಸರಿಗೆ ನೇತ್ರಪ್ರಾಯನಾಗಿದ್ದನು, ಅಗ್ನಿಹೋತ್ರಾದಿ ಧರ್ಮ ಕಾರ್ಯಗಳಲ್ಲಿ ನಿರತನಾಗಿದ್ದನು. ತನ್ನ ಅಪಾರವಾದ ಶಕ್ತಿಯಿಂದ ಅಮಾನುಷವಾದ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿದನು. ಅವೆಲ್ಲ ಲೋಕಕಲ್ಯಾಣಕ್ಕೆ ಉಪಯೋಗಿಸುವ ಬದಲು ಲೋಕಹಿಂಸೆಯಲ್ಲಿ ಪ್ರಯೋಗವಾಯಿತು. ಅದರ ಪರಾಕಾಷ್ಠೆಯನ್ನು ಶೂರ್ಪಣಖಿಯ ಮಾತುಗಳು ಸ್ಪಷ್ಟಪಡಿಸುವುವು'. ರಾವಣನು ಸಮರದಲ್ಲಿ ದೇವಗಂಧರ್ವ ಭೂಪಾಲ ಯೋಗಿಗಳಿಗೂ ಮಹಾತ್ಮರಾದ ಋಷಿಗಳಿಗೂ ಬಾಯ್ದೆರೆದು ಬಂದ ಯಮನಂತೆ ಅಜೇಯನಾದವನು. ದೇವಾಸುರ ಸಂಗ್ರಾಮಗಳಲ್ಲಿ ವಜ್ರಾಯುಧದಿಂದ ಗಾಯಗೊಂಡವನು, ವಿಷ್ಣುವಿನ ಚಕ್ರಾಯುಧದ ಪೆಟ್ಟನ್ನು ಸಹಿಸಿದವನು. ಅಕ್ಷೋಭ್ಯಗಳಾದ ಸಾಗರಗಳನ್ನು ಶೀಘ್ರದಲ್ಲಿಯೇ ಅಡಗಿಸಬಲ್ಲವನು. ಮಹಾಪರ್ವತಗಳನ್ನು ತೂರಾಡಿಸಿದವನು. ಯಜ್ಞಯಾಗಾದಿಗಳಿಗೆ ಯಾವಾಗಲೂ ವಿಘ್ನವನ್ನು ತಂದನು. ಭೋಗವತೀನಗರಕ್ಕೆ ಧಾಳಿಯಿಟ್ಟು ವಾಸುಕಿಯನ್ನು ಸೋಲಿಸಿದವನು. ತಕ್ಷಕನನ್ನು ಸೋಲಿಸಿ ಅವನ ಪ್ರಿಯಪತ್ನಿಯನ್ನಪಹರಿಸಿದವನು. ಕೈಲಾಕ್ಕೆ ಹೋಗಿ ಕುಬೇರನನ್ನು ಸೋಲಿಸಿ ಅವನ ಕಾಮಗಾಮಿಯಾದ ಪುಷ್ಪಕ ವಿಮಾನವನ್ನು ಕಸಿದು ತಂದವನು. ಚೈತ್ರರಥವೆಂಬ ಅವನ ಉದ್ಯಾನವನವನ್ನೂ ಅಲ್ಲಿನ ನಳಿನೀ ಸರೋವರವನ್ನೂ ನಂದನವನವೆಂಬ ದೇವೋದ್ಯಾನವನ್ನೂ ಸಿಟ್ಟಿನಿಂದ ನಾಶಗೊಳಿಸಿದವನು. ಸೂರ್ಯಚಂದ್ರರನ್ನು ಎರಡು ಕೈಗಳಿಂದ ತಡೆದು ನಿಲ್ಲಿಸುವ ಶಕ್ತಿಯುಳ್ಳವನು, ಹತ್ತುಸಾವಿರ ವರ್ಷಗಳಕಾಲ ಘೋರತಪಸ್ಸು ಮಾಡಿ ತನ್ನ ಶಿರಗಳನ್ನು ಬ್ರಹ್ಮನಿಗೆ ಕಾಣಿಕೆಯಾಗಿತ್ತವನು. ಅವನಿಗೆ ಮನುಷ್ಯರಿಂದ ವಿನಾ ಮತ್ತಾರಿಂದಲೂ ಮೃತ್ಯುಭಯವಿರಲಿಲ್ಲ. ಯಾಗಶಾಲೆಗಳಲ್ಲಿ ಬ್ರಾಹ್ಮಣರ ಸೋಮರಸವನ್ನು ಅಪಹರಿಸಿದವನು. ಯಜ್ಞಸಮಾಪ್ತಿಯಕಾಲದಲ್ಲಿ ಬಂದು ಅದನ್ನು ಕೆಡಿಸುತ್ತಿದ್ದ ಕ್ರೂರ. ಬ್ರಹ್ಮಹತ್ಯವನ್ನು ಮಾಡುತ್ತಿದ್ದ ದುರಾಚಾರೀ.ನಿರ್ದಯನಾದ ಉಗ್ರಸ್ವರೂಪಿ. ಜನರಿಗೆ ಕೇಡು ಮಾಡುವುದರಲ್ಲಿ ನಿರತನಾಗಿ ಸಕಲ ಪ್ರಾಣಿಗಳನ್ನೂ ಗೋಳಾಡಿಸಿದವನು. ಸರ್ವ ಲೋಕವನ್ನೂ ಅಂಜಿಸಿದವನು.

ಈ ವಿಷಯವನ್ನೇ ದೇವತೆಗಳು ರಾಮಾವತಾರವಾಗಬೇಕೆಂದು ಪ್ರಾರ್ಥಿಸುವಾಗ ಬ್ರಹ್ಮನಿಗೆ ಹೀಗೆ ತಿಳಿಸುತ್ತಾರೆ:- ಎಲೈ ಬ್ರಹ್ಮದೇವ, ಅವನ ತಪಸ್ಸಿಗೆ ಮೆಚ್ಚಿ ಅವನಿಗೆ ಅಮೋಘವಾದ

ವರವನ್ನು ಕೊಟ್ಟಿದ್ದೀಯೆ, ನಿನ್ನ ಅನುಗ್ರಹದಿಂದ ಅವನು ನಮ್ಮೆಲ್ಲರನ್ನೂ ಬಾಧಿಸುತ್ತಾನೆ. ನಮಗೆ ಅವನನ್ನು ದಂಡಿಸುವ ಬಲವಿಲ್ಲ, ತೀರದೆ ಅವನ ಹಿಂಸೆಯನ್ನು ಸಹಿಸಕೊಳ್ಳಬೇಕಾಗಿದ, ಆ ದುಷ್ಟನು ಮೂರು ಲೋಕವನ್ನು ಹಿಂಸಿಸುತ್ತಿದ್ದಾನೆ. ಲೋಕಪಾಲರನ್ನೂ ದ್ವೇಷಿಸುತ್ತಿದ್ದಾನೆ, ದೇವೇಂದ್ರನನ್ನೂ ಪದಚ್ಯುತನನ್ನಾಗಿ ಮಾಡಬೇಕೆಂದಿದ್ದಾನೆ. ಋಷಿಗಳು, ಗಂಧರ್ವರು, ಯಕ್ಷರು, ಅಸುರರು, ಬ್ರಾಹ್ಮಣರು ಎಲ್ಲರನ್ನೂ ಅತಿಕ್ರಮಿಸಿ ತೊಂದರೆಪಡಿಸುತ್ತಿದ್ದಾನೆ. ಅವನೆದುರಿಗೆ ಸೂರ್ಯನು ಜ್ವಲಿಸುವುದಿಲ್ಲ. ಗಾಳಿ ಬೀಸುವುದಿಲ್ಲ. ಸದಾ ಅಲೆಗಳಿಂದ ಅಪ್ಪಳಿಸುವ ಸಮುದ್ರರಾಜನೂ ಸ್ತಬ್ಧನಾಗುತ್ತಾನೆ. ಘೋರರೂಪಿಯಾದ ಅವನಿಂದ ಭಯವಾಗಿದೆ. ಅವನ ಸಂಹಾರಕ್ಕೆ ಸೂಕ್ತ ಏರ್ಪಾಡನ್ನು ಮಾಡು'.

ಲೋಕಕ್ಷೇಮಕ್ಕೆ ಹಾನಿಕರಗಳಾಗಿರುವ ವ್ಯಸನಗಳು ಮೂರು–

ತ್ರೀಣ್ಯೇವ ವ್ಯಸನಾನ್ಯತ್ರ
ಕಾಮಜಾನಿ ಭವತ್ಯುತ ।
ಮಿಥ್ಯಾವಾಕ್ಯಂ ಗುರುತರಂ
ತಸ್ಮಾದ್ಗುರುತರಂ ಉಭೇ ।
ಪರದಾರಾಭಿಗಮನಂ
ವಿನಾ ವೈರಂಚ ರೌದ್ರತಾ ॥

ಮಿಥ್ಯಾವಾಕ್ಯ, ಪರದಾರಾಭಿಗಮನ, ಕಾರಣವಿಲ್ಲದ ವೈರ–ಈ ಮೂರು ವ್ಯಸನಗಳು ಹಾನಿಕಾರವಾದುವು. ಇವು ಜಿತೇಂದ್ರಿಯದಿಂದ ಮಾತ್ರ ಪರಿಹರಿಸಲು ಸಾಧ್ಯ. ಇದರಿಂದ ಧರ್ಮವು ಸ್ಥಾಪಿತವಾಗುತ್ತದೆ.

ಧರ್ಮಾದರ್ಥ ಪ್ರಭವತೇಃ
ಧರ್ಮಾತ್ ಪ್ರಭವತೇ ಸುಖಂ
ಧರ್ಮೇಣ ಲಭತೇ ಸರ್ವಂ
ಧರ್ಮಸಾರಮಿದಂ ಜಗತ್ ॥

ಇದನ್ನು ಮೀರುವವನು ನಾಶವಾಗುತ್ತಾನೆ,

ಉದ್ವೇಜನೀಯೋ ಭೂತಾನಾಂ
ನೃಶಂಸಃ ಪಾಪಕರ್ಮಕೃತ್ ॥
ತ್ರಯಾಣಾಮಪಿ ಲೋಕಾನಾಂ
ಈಶ್ವರೋಽಪಿ ನ ತಿಷ್ಠತಿ ॥
ಕರ್ಮ ಲೋಕವಿರುದ್ಧಂತು
ಕುರ್ವಾಣಂ ಕ್ಷಣದಾಚರ
ತೀಕ್ಷ್ಣಂ ಸರ್ವಜನೋ ಹಂತಿ
ಸರ್ಪಂ ದುಷ್ಟಮಿವಾಗತಂ ॥

ದುಷ್ಕೃತ್ಯವನ್ನು ನಡೆಸುವ ಘಾತುಕನು ಮೂರು ಲೋಕಗಳಿಗೊಡೆಯನಾದರೂ ಬಹುಕಾಲ ಬಾಳಲಾರ. ಪ್ರಜಾವಿರೋಧ ಕಾರ್ಯವನ್ನು ಮಾಡುವ ಉಗ್ರಸ್ವಭಾವದವನನ್ನು ಮನೆಯಲ್ಲಿ ಸೇರಿರುವ ಕಟ್ಟಹಾವನ್ನು ಹೊಡೆದು ಹಾಕುವಂತೆ ಪ್ರಜೆಗಳು ಹೊಡೆದು ಕೊಲ್ಲುತ್ತಾರೆ. ಜಿಪುಣತನದಿಂದಲೋ ದುರಾಸೆಯಿಂದಲೋ ಪಾಪಕಾರ್ಯವನ್ನು ಮಾಡುತ್ತ ಸಂತೋಷದಿಂದುಬ್ಬಿ ಯಾವನು ಮದಿಸಿರುವನೋ ಅವನು ತನ್ನ ಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕು.

ರಾವಣನಿಗಾದುದೂ ಹಾಗೆಯೇ. ಅವನ ಅಂತಃಪುರದಲ್ಲಿ ಅಯ್ದು ಸಾವಿರ ಸ್ತ್ರೀರತ್ನಗಳಿದ್ದರೂ ಅವನ ಕಾಮ ಪಿಪಾಸೆಯಡಗಲಿಲ್ಲ. ಪರಸ್ತ್ರೀಹರಣವೂ ಪರದಾರಾಚೌರ್ಯವೂ ತನ್ನ ವಂಶದ ಆಜನ್ಮಗುಣ ಎಂದು ಪ್ರಶಂಸಿಸಿಕೊಳ್ಳುವನು.ಅವನ ಅತಿಕಾಮದಿಂದ ಕ್ರೋಧವು ಉಲ್ಬಣವಾಯಿತು. ಕ್ರೋಧದಿಂದ ಮೋಹ ಹೆಚ್ಚಿತು. ಸಂತೋಷದಿಂದ ಬುದ್ಧಿಭ್ರಮಣವಾಯಿತು. ಬುದ್ಧಿಭ್ರಂಶದಿಂದ ಆತ್ಮನಾಶವಾಯಿತು. ತನ್ನ ಸಹಜ ಪ್ರವೃತ್ತಿಗನುಗುಣವಾಗಿ ಮಹಾಪತಿವ್ರತೆಯಾದ ಸೀತಾದೇವಿಯನ್ನು ಅಪಹರಿಸಿ ಹಿಂಸಿಸಿದ. ಆಪ್ತರಾದ ಮಾರೀಚ, ವಿಭೀಷಣ, ಕುಂಭಕರ್ಣ, ಮಂಡೋದರಿ–ಮೊದಲಾದವರ ಹಿತವೂ ಪಥ್ಯವೂ ಆದ ಉಪದೇಶವು ಹಿತಕಾರಿಯಾಗಲಿಲ್ಲ. ಪ್ರಿಯವಾದ ಮಾತುಗಳನ್ನಾಡಿದ ತನ್ನಷ್ಟೇ ಲೋಕಹಿಂಸಕರಾದ ಇಂದ್ರಜಿತ್, ಪ್ರಹಸ್ತ, ಅತಿಕಾಯ ಮೊದಲಾದವರ ದುರ್ಬೋಧನೆ ಪಥ್ಯವಾಗಿ ಕಂಡಿತು. ಪುತ್ರ, ಮಿತ್ರ, ಭ್ರಾತೃಮರಣಗಳು ಅವನ ಮನಸ್ಸನ್ನು ಮೃದುಗೊಳಿಸುವ ಬದಲು ಹಟಮಾರಿತನಕ್ಕೆ ಪ್ರೇರೇಪಿಸಿತು, ಹನುಮಂತ, ಅಂಗದರ ಹಿತವಚನಗಳು ಕ್ರೋಧವನ್ನು ಉದ್ದೀಪನಗೊಳಿಸಿದುವು. ಮಾಯಾರಾಮ ಶವ ಪ್ರದರ್ಶನ, ಮಾಯಾಸೀತಾ ಶಿರಚ್ಛೇದನಾದಿ ವಂಚನಾ ಕಾರ್ಯಗಳಿಗೆ ಪ್ರೇರೇಪಿಸಿತು. ಲೋಕಹಿಂಸಾ ಕಾರ್ಯದಲ್ಲಿಟ್ಟ ಹೆಜ್ಜೆಯನ್ನು ಹಿಂದೆಗೆಯಲು ಅವಕಾಶವನ್ನು ಕೊಡಲೇ ಇಲ್ಲ, ಸಹಜವಾಗಿಯೇ ಧರ್ಮಕ್ಕೆ ಜಯವಾಯಿತು. ಅಧರ್ಮವು ನಿರ್ಮೂಲವಾಯಿತು. ವಿಶ್ವಕ್ಷೇಮ ಸಹಜವಾಗಿ ನೆಲೆಗೊಂಡಿತು

ಲೋಕಕಲ್ಯಾಣವುಂಟಾಗಬೇಕಾದರೆ ಯಾವೊಬ್ಬನೂ ಲೋಕರಾವಣನಾಗಬಾರದೆಂಬುದೇ ರಾವಣಪಾತ್ರದಿಂದ ತಿಳಿದು ಬರುವ ಪರಮ ಸಂದೇಶ.

---

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

# ಕರ್ನಾಟಕದ ಪ್ರಾಚೀನ ದೇವಾಲಯಗಳ ಪ್ರಾಧಾನ್ಯ

## ಪೀಠಿಕೆ

ಕರ್ನಾಟಕ ಹಲವು ಧರ್ಮಗಳ ಸಂಗಮ, ಇಲ್ಲಿ ಹಲವಾರು ಧರ್ಮಗಳೊಂದಿಗೆ ಹಿಂದೂ ಧರ್ಮದ ಹಲವಾರು ಪಂಥಗಳು ಪರಸ್ಪರ ಘರ್ಷಣೆಯಿಲ್ಲದೆ ಬೆಳೆದು ಬಂದವು, ಇಲ್ಲಿನ ಧರ್ಮ ಮತ್ತು ಪಂಥಗಳು ಭಕ್ತಿ ಮಾರ್ಗಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟವು. ಇದರಿಂದಾಗಿ ಕರ್ನಾಟಕದಲ್ಲಿ ದೇವ, ದೇವಿ ಮತ್ತು ಗ್ರಾಮದೇವತೆಗಳ ಗುಡಿಗಳು ಉದಯವಾದವು. ಈ ದೇವಾಲಯಗಳು ಜನರಲ್ಲಿ ಧಾರ್ಮಿಕ ಮನೋಭಾವನೆಯನ್ನು ಪ್ರಬಲಗೊಳಿಸಿದವು, ಇವು ಸಂಗೀತ, ಶಿಲ್ಪ ಮತ್ತು ಇನ್ನಿತರ ಕಲೆಗಳ ಪ್ರದರ್ಶನ ಮಂದಿರವಾಗಿದ್ದವು. ಕ್ರಮೇಣ ಈ ದೇವಾಲಯಗಳು ನ್ಯಾಯ ಮತ್ತು ವಿದ್ಯಾಪೀಠಗಳಾಗಿ ಪರಿಣಮಿಸಿದವು. ಒಟ್ಟಿನಲ್ಲಿ ದೇವಾಲಯಗಳು ಜೀವಂತ ಕೇಂದ್ರಗಳಾಗಿ ಕರ್ನಾಟಕ ಸಂಸ್ಕೃತಿಯನ್ನು ಬೆಳಗಿಸಲು ಸಹಾಯಕವಾದವು.

## ಪ್ರಮುಖ ದೇವಾಲಯಗಳ ರಚನೆ ಇತಿಹಾಸ

ಕರ್ನಾಟಕದಲ್ಲಿ ದೇವಾಲಯಗಳ ಸ್ಪಷ್ಟ ಬೆಳಕಿಗೆ ಬಂದದ್ದು ಕ್ರಿ.ಶ. 5 ನೇ ಶತಮಾನದ ನಂತರ, ಶಾಸನಗಳ ಆಧಾರದಿಂದ ಹೇಳುವುದಾದರೆ ತಾಳಗುಂದದ ದೇವಸ್ಥಾನವು ಪ್ರಾಚೀನವಾದುದು. ಇದರಲ್ಲಿನ ಪ್ರಣವೇಶ್ವರ ಲಿಂಗವನ್ನು ಕ್ರಿ.ಶ. 200 ರಲ್ಲಿ ಶಾತವಾಹನ ಚಕ್ರವರ್ತಿಗಳು ಪೂಜಿಸುತ್ತಿದ್ದರೆಂದೂ ಶಾಸನಗಳಿಂದ ತಿಳಿದುಬರುತ್ತದೆ. ಈಗಿರುವ ದೇವಾಲಯವನ್ನು ಕ್ರಿ.ಶ. 450 ರಲ್ಲಿ ಕದಂಬ ಅರಸನ ರಾಣಿಯಾದ ಪ್ರಭಾವತಿಯೂ ಮತ್ತು ಆಕೆಯ ಮಗ ರವಿವರ್ಮನೂ ಕಟ್ಟಿಸಿರಬೇಕೆಂದು ಬಾಗಿಲುವಾಡದ ಮೇಲಿರುವ ಶಾಸನದಿಂದ ತಿಳಿದು ಬರುತ್ತದೆ. ಈ ದೇವಾಲಯದ ಕಟ್ಟಡ ಚೌಕೋನ ರೂಪವಾಗಿಯೂ ಇದರ ಕಲ್ಲಿನ ಗೋಡೆಗಳು ಹೆಚ್ಚಾದ ಅಲಂಕಾರಗಳಿಲ್ಲದುದಾಗಿಯೂ ಛಾವಣಿ ಸಾಮಾನ್ಯವಾದ ಆಳವಿಲ್ಲದ ಪದ್ಮದಿಂದ ಅಲಂಕೃತವಾಗಿಯೂ ಇವೆ. ಈ ದೇವಸ್ಥಾನದ ಒಳಭಾಗವು ಹೋಮದೀಕ್ಷಾಪರವಾದ ಬ್ರಾಹ್ಮಣ ಸ್ನಾತಕರ ವೇದಘೋಷದಿಂದ ತುಂಬಿಹೋಗಿತ್ತೆಂದು ಶಾಸನಗಳು ಉಲ್ಲೇಖಿಸುತ್ತದೆ

ವಾತಾಪಿ ಚಾಲುಕ್ಯರ ಕಾಲದಲ್ಲಿ (540–750) ಕರ್ನಾಟಕದಲ್ಲಿ ಹಲವಾರು ದೇವ ಮತ್ತು ದೇವಿಗಳ ದೇವಾಲಯಗಳು ಉದಯವಾದವು. ಬಾದಾಮಿ, ಐಹೊಳೆ, ಮತ್ತು ಪಟ್ಟದಕಲ್ಲು ಪ್ರಮುಖ ದೇವಾಲಯ ಕೇಂದ್ರಗಳಾಗಿದ್ದವು. ಬಾದಾಮಿ ಗುಹಾಂತರ್ದೇವಾಲಯಗಳು ಕರ್ನಾಟಕ ದೇವಾಲಯಗಳಲ್ಲಿ ಪ್ರಮುಖ ಸ್ಥಾನ ಪಡೆದಿದ್ದು, ಇವುಗಳ ರಚನೆ, ದೇವಾಲಯದ ಇತಿಹಾಸದ ಒಂದು ಮುಖ್ಯ ಘಟನೆ ಎನ್ನಬಹುದು. ಈ ಗುಹಾಲಯಗಳಲ್ಲಿ ಬಾದಾಮಿ ಮೂರನೇ ಗುಹೆ ಅತ್ಯಂತ ಪ್ರಾಚೀನವಾದುದ್ದು. ಈ ಗುಹಾಲಯ ಶಾ. ಶಕ 500 ರಲ್ಲಿ (578) ಅಂದರೆ ಚಾಲುಕ್ಯ ಅರಸ ೧ನೇ ಕೀರ್ತಿವರ್ಮನ 12ನೇ ವರ್ಷದ ಆಳ್ವಿಕೆಯಲ್ಲಿ ಇವನ ತಮ್ಮ ಮಂಗಲೇಶನು ಈ ಗುಹೆಯನ್ನು ಕೊರೆಸಿ ಇಲ್ಲಿ ವಿಷ್ಣು ಪ್ರತಿಮೆ ಸ್ಥಾಪಿಸಿದನೆಂದು ಇಲ್ಲಿರುವ ಒಂದು ಶಾಸನ ತಿಳಿಸುತ್ತದೆ. ಇದು ಪ್ರಥಮವಾಗಿ ಕರ್ನಾಟಕದಲ್ಲಿ ನಮಗೆ ತೋರಿ ಬಂದ ವೈಷ್ಣವದೇವಾಲಯ, ಇಲ್ಲಿ ಕೆತ್ತಿರುವ ವೈಷ್ಣವ ವಿಗ್ರಹಗಳನ್ನು ವೀಕ್ಷಿಸಿದಾಗ, ವಿಷ್ಣು ಕಲ್ಪನೆ ಆಕಾಲದಲ್ಲಿ ಸ್ಪಷ್ಟವಾಗಿತ್ತೆಂದು ತಿಳಿದು ಬರುತ್ತದೆ. ಪಟ್ಟದಕಲ್ಲಿನ ಪಾಪನಾಥ ದೇವಾಲಯ ಕ್ರಿ.ಶ. 680 ರಲ್ಲಿ ನಿರ್ಮಾಣವಾದಂತೆ ತಿಳಿದುಬರುತ್ತದೆ. ಇಲ್ಲಿನ ಇನ್ನೊಂದು ದೇವಾಲಯ ವಿರೂಪಾಕ್ಷ. ಇದು ಕ್ರಿ ಶ. 740 ರಲ್ಲಿ ನಿರ್ಮಿತವಾಯಿತು. ಚಾಲುಕ್ಯಚಕ್ರವರ್ತಿ ಎರಡನೆಯ ವಿಕ್ರಮಾದಿತ್ಯನು ಪಲ್ಲವರನ್ನು ಸೋಲಿಸಿ ಕಂಚಿಯನ್ನು ಗೆದ್ದಾಗ, ಅಲ್ಲಿನ ದೇವಾಲಯಗಳನ್ನು ನೋಡಿ ಅದರಿಂದ ಸ್ಫೂರ್ತಿ ಪಡೆದು, ಅಲ್ಲಿನ ಶಿಲ್ಪಿಗಳನ್ನು ಕರೆಸಿ ಈ ದೇವಾಲಯ ರಚಿಸಿದನು. ಅನಿವಾರಿತ ಗುಂಡನು ತನ್ನ ಸಹ ಶಿಲ್ಪಿಗಳೊಡನೆ ಸೇರಿ ಈ ದೇವಾಲಯವನ್ನು ಕಟ್ಟಿದನೆಂದು ಶಾಸನದಿಂದ ತಿಳಿಯುತ್ತದೆ. ಈ ದೇವಾಲಯದ ವಾಸ್ತುಶಿಲ್ಪವನ್ನು ನೋಡಿದಾಗ ಚಾಲುಕ್ಯರ ಕಾಲದಲ್ಲಿ ವಾಸ್ತುಶಿಲ್ಪ ನಿಶ್ಚಿತ ಘಟ್ಟವನ್ನು ತಲುಪಿದಂತೆ ಕಾಣಬರುತ್ತದೆ. ಇದು ಶಿವಾಲಯವಾದರೂ, ಇಲ್ಲಿ ಶಿವನೊಂದಿಗೆ ಸೂರ್ಯನನ್ನು ಪೂಜಿಸುತ್ತಿದ್ದರೆಂದು ಇಲ್ಲಿನ ಅರ್ಧಮಂಟಪದಲ್ಲಿ ಕೆತ್ತಿಸಿದ ಸೂರ್ಯನ ವಿಗ್ರಹದಿಂದ ತಿಳಿಯಬಹುದು. ಈ ಗುಡಿಯ ರಚನೆ ಕ್ರಮೇಣ ರಾಷ್ಟ್ರಕೂಟ ಅರಸರಿಗೆ ಎಲ್ಲೋರದ ಕೈಲಾಸ ದೇವಾಲಯದ ರಚನೆಗೆ ಪ್ರೇರಣೆಯನ್ನಿತ್ತಿದೆಯೆಂದು ಅಭಿಪ್ರಾಯ ಪಡಲು ಅವಕಾಶವಿದೆ. ಇಷ್ಟೆ ಪ್ರಾಮುಖ್ಯತೆಯ ಇನ್ನೊಂದು ದೇವಾಲಯ ಮಲ್ಲಿಕಾರ್ಜುನ. ಎರಡನೆ ವಿಕ್ರಮಾದಿತ್ಯನ ರಾಣಿ ತ್ರೈಲೋಕ್ಯ ಮಹಾದೇವಿಯು ಈ ದೇವಾಲಯಗಳ ನಿರ್ಮಾಣಕ್ಕೆ ಕಾರಣಳು. ಹೆಚ್ಚು ಕಡಿಮೆ ವಿರೂಪಾಕ್ಷ ದೇವಾಲಯದ ನಿರ್ಮಾಣ ಸಮಯದಲ್ಲಿಯೇ ಇದೂ ಕಟ್ಟಲ್ಪಟ್ಟಿತು. ಈ ದೇವಾಲಯವು ಶಿಲ್ಪಗಳಿಗೆ ಹೆಚ್ಚಿನ ಗಮನ ಕೊಟ್ಟಿದೆ. ಇದು ಶಿವಾಲಯವಾದರೂ ಇಲ್ಲಿ ರಾಮಾಯಣ ಮಹಾಭಾರತ ಇತರ ಪುರಾಣಗಳ ಕಥೆಗಳು, ವೈಷ್ಣವ ದೇವತಾಮೂರ್ತಿಗಳು, ಗಂಧರ್ವರು ದಂಪತಿಗಳು ಮುಂತಾದ ಶಿಲ್ಪಗಳನ್ನು ಹೊಂದಿದೆ. ಇದು ಇಲ್ಲಿನ ಧಾರ್ಮಿಕ ಸಮನ್ವಯತೆಯ ದ್ಯೋತಕ.

ಡಾ॥ ಕೆ. ಜಿ. ವಸಂತಮಾಧವ

ಪ್ರಾಚೀನ ಕರ್ನಾಟಕ ದೇವಾಲಯಗಳಲ್ಲಿ ಶಿಲ್ಪದೃಷ್ಟಿಯಲ್ಲಿ ನಿರುಪಮವಾದದ್ದು. ಎಲ್ಲೋರದ ಕೈಲಾಸ ದೇವಾಲಯ–ಇದು ಈಗ ಮಹಾರಾಷ್ಟ್ರದಲ್ಲಿದ್ದರೂ ಹಿಂದೆ ಕರ್ನಾಟಕದ ಭಾಗವಾಗಿತ್ತು, ಇದನ್ನು ರಾಷ್ಟ್ರಕೂಟರರಸ ಒಂದನೇ ಕೃಷ್ಣ (756–74) ತನ್ನ ಹದಿನೆಂಟನೇ ವರ್ಷದ ಆಳಿಕೆಯಲ್ಲಿ (774 ರಲ್ಲಿ) ಒಂದು ಭಾರಿ ಕಲ್ಲು ಬಂಡೆಯನ್ನು ಕೊರೆದು ಕಟ್ಟಿಸಿದ. ಇದೇ ಏಕಶಿಲಾ, ಕೈಲಾಸ ಮಂದಿರ, ಈ ದೇವಾಲಯವು ಭಾರತೀಯ ವಾಸ್ತುಶಿಲ್ಪಕ್ಕೆ ಹೆಮ್ಮೆಯ ಕಾಣಿಕೆಯಾಗಿದೆ. "ವಿಮಾನದಲ್ಲಿ ಹೋಗುತ್ತಿದ್ದ ದೇವೇಂದ್ರನು ಈ ದೇವಾಲಯವನ್ನು ನೋಡಿ ವಿಸ್ಮಿತನಾದ". ಎಂಬುದಾಗಿ ಬರೋಡೆಯ ಶಾಸನ ಈ ದೇವಾಲಯವನ್ನು ವರ್ಣಿಸಿದೆ. ಸುಮಾರು 95 ಅಡಿ ಎತ್ತರದ ಉನ್ನತ ಗೋಪುರ ಹಾಗೂ ಸುತ್ತಲೂ ಪರಿವಾರ ದೇವತೆಗಳ ಗೋಪುರವನ್ನು ಹೊಂದಿಸಿರುವ ಅಪೂರ್ವ ಶಿಲ್ಪಗಳಿಂದ ಕೂಡಿದ ಈ ದೇವಾಲಯವು ಎಂದು ಅದ್ಭುತ ರಚನೆ. ಈ ದೇವಾಲಯದಲ್ಲಿನ ರಾವಣನು ಕೈಲಾಸವನ್ನು ಎತ್ತುತ್ತಿರುವುದು, ಶಿವ–ಪಾರ್ವತಿಯರ ಲೆತ್ತದಾಟ ಮುಂತಾದ ಕೆಲವು ಶಿಲ್ಪಗಳು ಅಪೂರ್ವವಾದವುಗಳು. ಕ್ರಿ.ಶ. 9 ನೇ ಶತಮಾನದಿಂದ ಹದಿಮೂರನೇ ಶತಮಾನದ ಅವಧಿಯಲ್ಲಿ ಕರ್ನಾಟಕದಲ್ಲಿ ಹಲವಾರು ದೇವ, ದೇವಿ ಮತ್ತು ಪರಿವಾರ ದೇವತೆಗಳನ್ನೊಳಗೊಂಡ ದೇವಾಲಯಗಳು ಉದಯವಾದವು, ವಿದ್ಯಾವರದ ಚಂಬುಕಲ್ಲು (ಸೋಮೇಶ್ವರ) ತುಳುನಾಡಿನಲ್ಲಿ ಪ್ರಾಚೀನ ದೇವಾಲಯ, ಹನ್ನೊಂದನೇ ಶತಮಾನದಲ್ಲಿ ಗೋಕರ್ಣ ಮಹಾಬಳೇಶ್ವರ ದೇವಾಲಯ ಚಂದಾವರದ ಕದಂಬ ಅರಸರ ಕುಲದೇವತೆಯಾಗಿ ಇವರಿಂದ ಬಹಳ ಭೂದಾನವನ್ನು ಪಡೆಯಿತು.

ಇದೇಕಾಲದಲ್ಲಿ ಧಾರೇಶ್ವರ ಮತ್ತು ಬೈಂದೂರಿನ ಶನೀಶ್ವರ ದೇವಾಲಯಗಳು ರಚನೆಗೊಂಡವು. ಬಿಸ್ಸೂರಿನಲ್ಲಿ ನಖರವೆಂಬ ವರ್ತಕ ಸಂಘ ಕ್ರಿ.ಶ. 1154 ರಲ್ಲಿ ನಖರೇಶ್ವರ ದೇವಸ್ಥಾನ ಕಟ್ಟಿದರು. ರಾಮಾನುಜಾಚಾರ್ಯರ ಪ್ರಯತ್ನದಿಂದಾಗಿ, ಕರ್ನಾಟಕದಲ್ಲಿ ವೈಷ್ಣವದೇವಾಲಯಗಳು ಬೆಳಕಿಗೆ ಬಂದವು. ಇವುಗಳಲ್ಲಿ ಮುಖ್ಯವಾದದು. ಮೇಲುಕೋಟೆ ಚೆಲುವ ನಾರಾಯಣ. ಇಲ್ಲಿನ ವಿಗ್ರಹವನ್ನು ರಾಮಾನುಜಾಚಾರ್ಯರು ದಿಲ್ಲಿಯಿಂದ ತಂದು ಸ್ಥಾಪಿಸಿದರೆಂಬ ಐತಿಹ್ಯ ಇದೆ. ತೊಂಡನೂರಿನ ವೀರನಾರಾಯಣ, ಬೇಲೂರಿನ ಚೆನ್ನಕೇಶವ ದೇವಾಲಯಗಳು ವಿಷ್ಣುವರ್ಧನನಕಾಲದಲ್ಲಿ (1108–1152) ನಿರ್ಮಿತವಾದವುಗಳು. ಕ್ರಿ.ಶ. 8 ಮತ್ತು 13ನೇ ಶತಮಾನಗಳಲ್ಲಿ ಶಂಕರ ಮತ್ತು ಮಧ್ವಾಚಾರ್ಯರಿಂದ ವೈಷ್ಣವಧರ್ಮ ಕರಾವಳಿ ಕರ್ನಾಟಕದಲ್ಲಿ ಪ್ರಚಾರವಾಯಿತೆಂದು ಸಾಹಿತ್ಯ ಬರಹಗಳು ತಿಳಿಸಿದರೂ ಇಲ್ಲಿ ವಿಷ್ಣುದೇವಾಲಯದ ಸ್ಥಾಪನೆಯಾದದ್ದು ಚಂದಾವರದಲ್ಲಿಯೆಂದು 1222 ನೇ ಶಾಸನದಿಂದ ತಿಳಿದು ಬರುತ್ತದೆ. ಇಲ್ಲಿ ಹೇಳಿದ ವಿಷ್ಣುದೇವಾಲಯ ಯೋಗನರಸಿಂಹ. ಕ್ರಿ.ಶ. 1286 ರಲ್ಲಿ ಬಾರಕೂರಿನಲ್ಲಿ ಗೋಪೀನಾಥದೇವಾಲಯ ಸ್ಥಾಪಿತವಾಯಿತು. ಹಿಂದು ಮತದ ತ್ರಿಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರ ಪ್ರಸ್ತಾಪವು ಕ್ರಿ. ಶ. 1302 ನೇ ಮಂಗಳೂರಿನ ಶಾಸನದಲ್ಲಿ ಕಂಡುಬರುತ್ತದೆ.

## ದೇವಾಲಯದ ನಿರ್ಮಾಣ ಮತ್ತು ದತ್ತಿ ವಿನಿಯೋಗ

ದೇವಸ್ಥಾನಗಳ ನಿರ್ಮಾಣಕ್ಕೆ ಮುಖ್ಯಕಾರಣ ಜನರಲಿದ್ದ ಭಕ್ತಿ. ಸ್ವರ್ಗದಲ್ಲಿ ಒಂದು ಸ್ಥಾನವನ್ನು ದೊರಕಿಸಿಕೊಳ್ಳಲು, ಅಂತರಂಗ ಶುದ್ಧಿಯನ್ನು ಪಡೆಯಲು, ತನಗೂ ತನ್ನ ಬಂಧುಗಳಿಗೂ ಪುಣ್ಯ ಸಂಪಾದಿಸಿಕೊಳ್ಳಲು ದೇವಾಲಯವನ್ನು ಕಟ್ಟಿಸಿದರು ಕನ್ನಡನಾಡಿನ ಪೂರ್ವಜರು. ಒಂದು ಊರಿನಲ್ಲಿ ಸಾಮಾಜಿಕ ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಬರಲು ದೇವಾಲಯ ಅಗತ್ಯವೆಂದು ರಾಜರುಗಳು ಮತ್ತು ಪ್ರಮುಖ ಪ್ರಜೆಗಳು ತಿಳಿದಿದ್ದರು. ಇದು ಕನ್ನಡನಾಡಿನ ಕೆಲವು ಐತಿಹಾಸಿಕ ದಾಖಲೆಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ದೇವಾಲಯಗಳು ನಿರ್ಮಾಣವಾದೊಡನೆ ರಾಜರು ಮತ್ತು ಹಲವಾರು ಪ್ರಮುಖ ವ್ಯಕ್ತಿಗಳು ದತ್ತಿಯನ್ನು ಬಿಡುತ್ತಿದ್ದರು. ಹೀಗೆ ಬಿಟ್ಟ ದತ್ತಿಗಳು ದೇವಾಲಯಗಳ ಅಭಿವೃದ್ಧಿಗೆ ಸಹಕಾರಿಯಾದವು. ದತ್ತಿಯನ್ನು ಬಿಡುವಾಗ ಅವುಗಳು ಯಾವರೀತಿಯಲ್ಲಿ ವಿನಿಯೋಗವಾಗಬೇಕೆಂಬುದನ್ನು ಶಾಸನಗಳು ತಿಳಿಸುತ್ತವೆ. ವಿದ್ಯಾಭ್ಯಾಸ, ಜನರ ಅಭಿವೃದ್ಧಿಗಾಗಿ ಮತ್ತು ದೇವತಾ ವಿನಿಯೋಗಕ್ಕೆ ಈ ದತ್ತಿಗಳು ಹೆಚ್ಚಾಗಿ ಉಪಯೋಗಿಸಲ್ಪಡುತಿದ್ದುವು. ದೇವಸ್ಥಾನಗಳಿಂದ ಬಂದ ದತ್ತಿಯನ್ನು ರಕ್ಷಿಸಲು ಊರಿನ ನಾಲ್ಕಾರು ಜನರನ್ನು ಧರ್ಮದರ್ಶಿಗಳಾಗುವಂತೆ ಕೇಳಿಕೊಳ್ಳುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಅದು ಇಡೀ ಊರಿನ ಸಾಮೂಹಿಕ ಜವಾಬ್ದಾರಿಯಾಗಿರುತ್ತಿತ್ತು. ಈ ಜವಾಬ್ದಾರಿ ಹಲವು ರೀತಿಗಳಾಗಿರುತ್ತಿತ್ತು.

---

ದೇವರಿಗೆ ಸೇರಿದ ಭೂಮಿಗಳಿಂದ ಬರುವ ಆದಾಯವನ್ನು ಧಾರ್ಮಿಕ ಕಾರ್ಯಗಳಿಗೆ ವಿನಿಯೋಗಿಸಬೇಕು. ಇದರಿಂದಾಗಿ ದೇವಾಲಯಗಳು ಊರಿನ ಧಾರ್ಮಿಕ ಕೇಂದ್ರವಾದವು. ಇಷ್ಟಲ್ಲದೆ ಕೆಲವು ದೇವಾಲಯಗಳು ನಾಡಿನ ಜೀವನದಲ್ಲಿ ಹಲವಾರು ಪಾತ್ರಗಳನ್ನು ವಹಿಸಿ, ನಾಗರಿಕ ಜೀವನದ ಉತ್ತಮ ಕಲೆಗಳನ್ನು ಆಕರ್ಷಿಸಿ ಧರ್ಮಬುದ್ಧಿಯಿಂದ ಅವನ್ನು ನಿಯಂತ್ರಿಸಿ ಸಮಾಜಕ್ಕೆ ಒಂದು ವಿಶಿಷ್ಟರೂಪವನ್ನು ಕೊಟ್ಟವೆ.

## ದೇವಸ್ಥಾನದ ಅಧಿಕಾರವರ್ಗ

ದೇವಸ್ಥಾನದಲ್ಲಿ ಹಲವಾರು ಅಧಿಕಾರವರ್ಗಗಳಿದ್ದವು. ಶಾಸನಗಳಲ್ಲಿ ಸ್ಥಾನಪತಿ, ಕರ್ತ, ಅರ್ಚಕ, ತಂತ್ರಿ, ಜೋತಿಷ್ಯಕಾರ, ಇತ್ಯಾದಿ ಅಧಿಕಾರಿಗಳು ಕಾಣಿಸಿಕೊಳ್ಳುತ್ತಿದ್ದರು. ಉದಾ ಮಂಗಲಾಪುರದ ಬಂಕೇಶ್ವರ ದೇವಾಲಯದ ಶಾಸನ (ಕ್ರಿ.ಶ.1204)ದಂತೆ ಸ್ಥಾನತಂತ್ರಿ, ಪಾದಮೂಲದವರು, ಅಧ್ಯಕ್ಷ, ಸೇನಭೋವ, ಅಧಿಕಾರಿ, ಅಂಗಡಿಯ ಅಧಿಕಾರಿ ಮತ್ತು ಕುಟಾಡುವ ಬಾಕನಂಗೆಯರು ಇದ್ದಿದ್ದರು. ಈ ಶಾಸನ ಈ ಅಧಿಕಾರಿಗಳ ಕರ್ತವ್ಯಗಳನ್ನು ಮತ್ತು ಅವುಗಳ ಚ್ಯುತಿಯಾದರೆ ಆಗುವ ಶಿಕ್ಷೆಗಳನ್ನು ತಿಳಿಸಿವೆ. ಸ್ಥಾನದ ತಂತ್ರಿ-ಸಂಕ್ರಾಂತಿಗಳನ್ನು ತಪ್ಪದೆ ಅಯನದ ಅವಭೃತ ಸ್ನಾನದವರೆಗೆ ತಾನು ಮಾಡಿರುವ ಕ್ರಮಗಳನ್ನು ಮಾಡಬೇಕು, ಮಾಡದಿದ್ದಲ್ಲಿ ಹತ್ತುವರೆ ಹೊನ್ನುದಂಡ.

ಪಾದಮೂಲದವರು – ನೈವೇದ್ಯಕ್ಕೆ ಸಲ್ಲಿಸುವ ಅಕ್ಕಿ ಹೊತ್ತು ತಪ್ಪದೆ ಅಳತೆ ಕುಂದದೆ ಸಲ್ಲಿಸಬೇಕು. ತಪ್ಪಿದರೆ ಐದುವರೆ ಹೊನ್ನದಂಡ.

ಅಧ್ಯಕ್ಷ-ದಿನ ದಿನ ನಡೆವ ಕಥಾಮಾಲೆಯನ್ನು ದಿನವೂ ನೋಡಿ ಹೇಳಬೇಕು. ಹೇಳದಿದ್ದಲ್ಲಿ ಐದುವರೆ ಹೊನ್ನದಂಡ,

ಸೇನಬೋವ : ಈ ಮೇಲಿನ ಅಧಿಕಾರಿಗಳು ತಮ್ಮ ತಮ್ಮ ಕ್ರಮಗಳನ್ನು ಪರಿಪಾಲಿಸುವ ಅಥವಾ ಪರಿಪಾಲಿಸದಿರುವ ಬಗ್ಗೆ ಇವನು ದಿನನಿತ್ಯದ ಆಗು ಹೋಗುಗಳನ್ನು ಬರೆದಿಡ ಬೇಕು. ಬರೆಯದಿದ್ದಲ್ಲಿ ಅವನಿಗೆ ಹತ್ತುವರೆಹೊನ್ನುದಂಡ.

ಅಧಿಕಾರಿ: ಈ ಮೇಲಿನವರಲ್ಲಿ ಯಾರಾದರು ಕಾರ್ಯಭ್ರಷ್ಟರಾದರೆ ಅವರನ್ನು ಶಿಕ್ಷಿಸಿ, ದಿನನಿತ್ಯವು ನಂದಾದೀವಿಗೆಗೆ ಎಣ್ಣೆಯನ್ನು ಸಲ್ಲಿಸಬೇಕು, ತಪ್ಪಿದರೆ ಹತ್ತುವರೆ ಹೊನ್ನುದಂಡ, ಅಂಗಡಿಯ ಅಧಿಕಾರಿ ಶಿವರಾತ್ರಿಯ ಎಣೆ ಅಯನದಲ್ಲಿ ಮತ್ತು ಆರಾಧನೆ ದಿನದಲ್ಲಿ ಬ್ರಾಹ್ಮಣ ಭೋಜನಕ್ಕಾಗಿ ಅಕ್ಕಿಯನ್ನು ಸಲ್ಲಿಸಬೇಕು. ತಪ್ಪಿದರೆ ಹತ್ತುವರೆ ಹೊನ್ನು ದಂಡ.

ಅಲ್ಲದೆ ದತ್ತಮಂಗಲದ ಅಧಿಕಾರಿಗಳು ಆಯನಕ್ಕೆ ನಡೆಸುವ ಮರ್ಯಾದೆಯನ್ನು ನಡೆಸಿಕೊಂಡು ಬಾರದಿದ್ದಲ್ಲಿ ಅವರಿಗೆ ನೂರೊಂದು ಹೊನ್ನುದಂಡವೆಂದೂ, ಅಪ್ಪಣ್ಣನೆಂಬಾತನು ದಿನದಿನವೂ ದೇವಾಲಯಕ್ಕೆ ಹೋಗಿ ನಂದಾದೀವಿಗೆಯು "ನಂದದೆ ನೋಡದಿರ್ದೊಡೆ ಹತ್ತುವರೆ ಹೊನ್ನು ದಂಡ"ವೆಂದೂ ಶಾಸನದಲ್ಲಿ ಹೇಳಲಾಗಿದೆ. ಈ ಕಾರ್ಯಕ್ರಮಗಳು ತಪ್ಪದೆ ನಡೆದು ನೋಡಿಕೊಳ್ಳುವ ಮಹಾಭಾರವು ರಾಜನದು; "ಇಂತಿವೆಲ್ಲವಂ ವಿಚಾರಿಸಿ ರಕ್ಷಿಸದಿದ್ದರೆ ಅರಸಂಗೆ ಗಂಗೆ ರಾಮೇಶ್ವರದಲು ಸಾವಿರ ಕಪಿಲೆ, ಸಾವಿರ ಬ್ರಾಹ್ಮಣರ ಕೊಂದ ಪಾಪ".

## ದೇವಾಲಯಗಳ ಸಾಮಾಜಿಕಪಾತ್ರ

ಕನ್ನಡ ಕರಾವಳಿಯಲ್ಲಿರುವ ಸೀಮಂತೂರು ಜನಾರ್ದನ, ಕಾಪಿನ ಜನಾರ್ದನ ಯೆಲ್ಲೂರಿನ ವಿಶ್ವನಾಥ, ಕಾಂತಾವರದ ಕಾಂತೇಶ್ವರ ಮತ್ತು ಧರ್ಮಸ್ಥಳದ ಮಂಜುನಾಥ ದೇವಾಲಯಗಳು ನ್ಯಾಯಸ್ಥಾನಗಳಾಗಿದ್ದವು. ಈ ದೇವಾಲಯಗಳಲ್ಲಿ ನ್ಯಾಯ ತೀರ್ಮಾನವಾಗುವುದಲ್ಲದೆ, ಸ್ಥಳೀಯ ಅರಸುಗಳು ಒಪ್ಪಂದವನ್ನು ಮಾಡಿಕೊಂಡು ಬಂದಿದ್ದರು. ಇವುಗಳ ಸಾಕ್ಷಿ ಈ ದೇವಾಲಯಗಳ ದೇವತೆಗಳು. ಈ ದೇವತೆಗಳ ಮುಂದೆ ಸುಳ್ಳು ಸಾಕ್ಷಿ ನೀಡಲು ಜನ ಅಂಜುತಿದ್ದರು. ಇಷ್ಟಲ್ಲದೇ ದೇವರು ಕೊನೆಯ ನ್ಯಾಯಾಧೀಶನೆಂಬ ಭಾವನೆಯು ಜನರಲ್ಲಿ ಪ್ರಬಲವಾಗಿ ಬೇರೂರಿತ್ತು, ದೇವರು ತಮ್ಮನ್ನು ಕಷ್ಟಸಮಯದಲ್ಲಿ ಕಾಪಾಡುತ್ತಾನೆಂದು ಜನರು ನಂಬಿದ್ದರು.

ಕ್ರಿ.ಶ. 9 ನೇ ಶತಮಾನದ ನಂತರ ಕರ್ನಾಟಕದ ಕೆಲವು ದೇವಾಲಯಗಳು ವಿದ್ಯಾಕೇಂದ್ರಗಳಾದವು. ಉದಾ: ಚಿತ್ರದುರ್ಗ ಜಿಲ್ಲೆಯ ಹರಿಹರದ ಹರಿಹರೇಶ್ವರ ದೇವಸ್ಥಾನ ವಿದ್ಯಾಕೇಂದ್ರವಾಗಿತ್ತು. ಇಲ್ಲಿನ ಪಂಡಿತರು ಋಗ್ವೇದ, ಯಜುರ್ವೇದ, ವ್ಯಾಕರಣ, ಮೀಮಾಂಸೆ, ಅಕ್ಷರ, ಶಿಕ್ಷೆಗಳನ್ನು ಕಲಿಸುತ್ತಿದ್ದರು. ಕ್ರಿ.ಶ. 1151ರ ಶಾಸನದಂತೆ ತಾಳಗುಂದ ಪ್ರಣವೇಶ್ವರ ದೇವಾಲಯವೂ ಒಂದು ವಿದ್ಯಾಕೇಂದ್ರ. ಇಲ್ಲಿ ಕಲ್ಪ, ರೂಪಾವತಾರ, ನ್ಯಾಸಗಳನ್ನು ಒಳಗೊಂಡ ಶಬ್ದ ಶಾಸ್ತ್ರದ ಅಧ್ಯಯನ ನಡೆಯುತ್ತಿದ್ದವು. ಇದೇ ರೀತಿಯಲ್ಲಿ ಗೋಕರ್ಣ, ಬೈಲೂರಿನ ಮುಡಕೇಶ್ವರ ಗುಜ್ಜಾಡಿಯ ಗುಹೇಶ್ವರ ಮತ್ತು ಉಡುಪಿಯ ಅನಂತೇಶ್ವರ ದೇವಾಲಯಗಳು ವಿದ್ಯಾಕೇಂದ್ರಗಳಾಗಿದ್ದವು: ದೇವಸ್ಥಾನಗಳಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳಲ್ಲಿ ವಿದ್ಯಾರ್ಥಿ ಮಾಣಿಯರು ಮತ್ತು ವಿದ್ಯಾರ್ಥಿ ತಪೋಧರರೆಂಬ ವಿಭಾಗಗಳಿವೆ. ಒಂದನೇ ವರ್ಗದ ವಿದ್ಯಾರ್ಥಿಗಳು ದೇವಸ್ಥಾನಗಳಲ್ಲಿ ಓದು ಮುಗಿದನಂತರ ಗೃಹಸ್ಥರಾಗತಕ್ಕವರು. ವಿದ್ಯಾರ್ಥಿ ತಪೋಧರರು (ಎರಡನೆ ವರ್ಗ) ಆಜೀವ ಪರ್ಯಂತ ಬ್ರಹ್ಮಚಾರಿಗಳಾಗಿ ಉಳಿದು ತಮ್ಮ ಅಧ್ಯಯನ ಮುಗಿದ ಮೇಲೆ ಬೇರೆ ಬೇರೆ ಮಠಗಳಲ್ಲಿ ಸ್ಥಾನ ಪತಿಗಳಾಗುತ್ತಿದ್ದರು. ಇವರ ಏಕೈಕ ಗುರಿ ಜ್ಞಾನಾರ್ಜನೆ. ಇವರು ಕರ್ತವ್ಯ ಭ್ರಷ್ಟರಾದರೆ, ಇವರನ್ನು ದೇವಾಲಯದಿಂದ ಅಟ್ಟಬೇಕು ಎಂದು ಅನೇಕ ಶಾಸನಗಳು ತಿಳಿಸಿವೆ. ದೇವಾಲಯಗಳು ಸಾಮಾಜಿಕ ಸಂಘಟನೆ ಕಾರಣಗಳಾಗಿದ್ದವು. ದೇವಾಲಯಗಳಲ್ಲಿ ನಡೆಯುವ ರಥೋತ್ಸವ ಹಳ್ಳಿಗರ ಬಾಳಿಗಲ್ಲಿ ಅತ್ಯಂತ ಸಂತೋಷಕರ ಸುದಿನ. ತುಳುನಾಡಿನ ದೇವಾಲಯಗಳ ಉತ್ಸವದಲ್ಲಿ ಬಲ್ಲಾಳ ಮೊಗಣೆ ಅಧಿಕಾರಿಗಳು, ಗುರಿಕಾರ, ಭಾವ ಬಾಳಿಕೆ ಮತ್ತು ಪರಾರಿಯವರು ಅಗ್ರಸ್ಥಾನವನ್ನು ವಹಿಸುತ್ತಾರೆ. ಈ ಉತ್ಸವಗಳು ಹಳ್ಳಿಯವರಿಗೆ ಭಕ್ತಿಯುತ ಮನೋರಂಜನೆಯಾಗಿದೆ. ಈ ಉತ್ಸವಗಳು ಜನರನ್ನು ಒಂದುಗೂಡಿಸುತಿದ್ದವು, ಇಷ್ಟಲ್ಲದೆ ಜನರು ಮನಶ್ಶಾಂತಿ, ಮತ್ತು ಅಧ್ಯಾತ್ಮಿಕ ತೃಪ್ತಿಗಳನ್ನು ಪಡೆಯುತಿದ್ದರು.

## ಉಪಸಂಹಾರ

ಕನ್ನಡನಾಡಿನಲ್ಲಿ ದೇವಾಲಯಗಳು, ಭಕ್ತಿಯನ್ನು ಜನರಲ್ಲಿ ಪ್ರಚಾರಗೊಳಿಸಿ, ಕಲೆಯನ್ನು ಬೆಳಗಿಸಿ ಸಾಮಾಜಿಕ ನಿಯಮಗಳನ್ನು ಕಾಪಾಡಿಕೊಂಡು ಬಂದವು. ಇಲ್ಲಿನ ದೇವಾಲಯಗಳು ಇಹ ಮತ್ತು ಪರಗಳ ಸಂಗಮ, ಕನ್ನಡಿಗರ ಜೀವನದಲ್ಲಿ ಒಂದು ಸಂಯಮವನ್ನು ಸಾಧಿಸಲು ಸಹಕಾರಿಯಾದವು. ಒಟ್ಟಿನಲ್ಲಿ ಕನ್ನಡನಾಡಿನ ದೇವಾಲಯಗಳು ಇಲ್ಲಿನ ಸಮಾಜಕ್ಕೆ ಲಾಭದಾಯಕವಾಗಿ ವರ್ತಿಸಿದವು ಎಂದು ಐತಿಹಾಸಿಕ ದಾಖಲೆಗಳಿಂದ ತಿಳಿದು ಬರುತ್ತವೆ.



# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಮಾತೃದೇವೋಭವ

ಗಂಗಾನದಿಯ ವಿಶಾಲ ಪ್ರವಾಹದಲ್ಲಿ ಮನಸೋಕ್ತವಾಗಿ ಸೂರ್ಯಕಿರಣಗಳು ಪಸರಿಸಿದ್ದ ಬಿಸಿಲಿನ ತಾಪವನ್ನು ಲೆಕ್ಕಿಸದೆ ಪೂರ್ವಾಭಿಮುಖವಾಗಿ ನಿಂತು ಕೊಂಡಿದ್ದ ಕರ್ಣನು ತನ್ನ ಬೊಗಸೆಯಲ್ಲಿ ನೀರನ್ನು ಹಿಡಿದುಕೊಂಡು ಎಂದಿನಂತೆ ಮುಖ ವನ್ನು ಹಿಂದಕ್ಕೆ ತಿರುಗಿಸದೆ "ಯಾರಾದರೂ ಯಾಚಕರಿದ್ದಾರೆಯೇ?" ಎಂದು ಕೇಳಿದ. ಆತನ ಮಾತಿಗೆ ಪ್ರತ್ಯುತ್ತರವು ಬಾರ ದಿದ್ದಾಗ ಸೂರ್ಯದೇವನಿಗೆ ಅರ್ಘ್ಯ ವನ್ನಿತ್ತು ದಡವನ್ನು ತಲುಪಿದ, ಆಗ "ಸ್ವಲ್ಪನಿಲ್ಲು" ಎಂಬ ಧ್ವನಿ ಕೇಳಬಂದಿತು. ಕರ್ಣನು ಮುಂದೆಬಂದು ನೋಡಿದಾಗ ಅರ್ಜುನನ ತಾಯಿ ಶತ್ರುಪಕ್ಷದವರ ಮಾತೆ ಕುಂತೀದೇವಿ ಏಕಾಂಗಿಯಾಗಿ ನಿಂತಿರುವುದು ಕಾಣಿಸಿತು.

"ಗುರುತು ಸಿಕ್ಕಿತೇ"

"ತಮ್ಮನ್ನಾರು ಗುರುತಿಸುವುದಿಲ್ಲ. ಪಾಂಡವರ ಮಾತೆ, ಅಷ್ಟೇ ಅಲ್ಲ ತಾವು ರಾಜ ಮಾತೆ, ಅಧಿರಥ ಸೂತಪುತ್ರ ತಮಗೆ ನಮಸ್ಕರಿಸುತ್ತಾನೆ."

ಕರ್ಣಾ ನಿನಗೆ ಇಷ್ಟೇ ಪರಿಚಯವಿದೆಯೆ?

ರಾಜಮಾತಾ ತಾವು ವೀರಮಾತೆ, ವೀರ ಪತ್ನಿ ಎಂದೆನಿಸಿಕೊಳ್ಳುವಿರಿ, ಇಂಥ ಕಡು ಬಿಸಿಲಿನಲ್ಲಿ ಬಂದುದೇಕೆ ಎಂಬುದನ್ನಾದರೂ ತಿಳಿಸಬಾರದೆ?

ನಿನ್ನ ಕೀರ್ತಿ ನನ್ನನ್ನು ಇಲ್ಲಿಯವರೆಗೂ ಕರೆತಂದಿತು. ಮಹಾದಾನಿ ಎಂದು ಕೇಳಿರುವೆ, ಯಾಚಕಳಾಗಿ ಬಂದಿದ್ದೇನೆ.

ಎಂಥ ಮಾತಿದು!

ಕರ್ಣಾ ಈ ಅಜ್ಞಾನದ ಆವರಣವನ್ನೇಕೆ ಆಶ್ರಯಿಸುವೆ, ಕೃಷ್ಣ ನಿನಗೆಲ್ಲವನ್ನೂ ಹೇಳಿದ್ದಾನೆ. ನನ್ನ ನಿನ್ನ ಬಾಂಧವ್ಯ ಎಂಥ ದೆಂಬುದನ್ನು ನೀನು ಚೆನ್ನಾಗಿ ಬಲ್ಲೆ.

ರಾಜಮಾತೆ, ನಿಮಗೇನು ಬೇಕಾಗಿದೆ?

ನನಗೆ ನಿನ್ನ ವಿಜಯವನ್ನು ನೋಡ ಬೇಕಾಗಿದೆ. ನಾನು ನಿನ್ನನ್ನು ಕರೆ ದೊಯ್ಯಲು ಬಂದಿದ್ದೇನೆ.

ಎಲ್ಲಿಗೆ!

ತಾಯಿಯಾದವಳು ಮಗನನ್ನು ಕರೆ ದೊಯ್ಯುವುದೆಲ್ಲಿಗೆ, ತನ್ನ ಹೃದಯದ ವಿನಃ ಅವಳಿಗೆ ಬೇರೊಂದು ಸ್ಥಾನವಿದೆಯೆ?

ಹರಿವ ಪ್ರವಾಹದಲ್ಲಿ ತೇಲುವವನಿಗೆ ದಂಡೆಯ ಅರಿವಾದರೂ ಯಾತಕ್ಕೆ ಬೇಕು. ಈ ಪ್ರೌಢಾವಸ್ಥೆಯಲ್ಲಿ ಆ ಸಂಬಂಧವನ್ನು ತಿಳಿದುಕೊಂಡು ತಾಯಿಯಾದವಳನ್ನು ತಬ್ಬಿ ಕುಣಿದಾಡಲು ಸಾಧ್ಯವೇ?

ಕರ್ಣಾ, ಮಾತೃತ್ವವು ಯಾವಾಗಲೂ ಪರಾಧೀನವಾದುದಲ್ಲ.

ರಾಜಮಾತಾ, ತಾವು ದಯಪಾಲಿಸ ಬೇಕೆಂದಿರುವ ಅಂತಃಕರಣದ ಬಗ್ಗೆ ನಾನು ಋಣಿಯಾಗಿರುವೆ. ಮರ್ಯಾದೆಯಿಂದ ಜ್ಞಾತವಾದ ಜ್ಞಾನವು ಮಾನವನಿಗೆ ವರ ವಾಗಿರುತ್ತದೆ, ಅದೇ ಮರ್ಯಾದೆಯ ಸೀಮಾರೇಖೆಯನ್ನು ದಾಟಿದಲ್ಲಿ ಆ ಜ್ಞಾನವು ವಿನಾಶಕ್ಕೆ ಕಾರಣವೆನಿಸುತ್ತದೆ.

ಕರ್ಣಾ, ಮಾತೃಪ್ರೇಮಕ್ಕೆ ಮರ್ಯಾದೆಯ ಬಂಧನವಿಲ್ಲ, ನೀನು ನನ್ನವನು, ನಿನ್ನ ಮೇಲೆ ನನ್ನ ಅಧಿಕಾರ ವಿದೆ.

ಬೇಡ ತಾಯಿ, ಕಲಂಕಿತವಾದ ಮಾತೃ ಪ್ರೇಮದ ವಿಚಾರವನ್ನು ಮಾಡುವುದು ಬೇಡ

ಮಗೂ ಮಾತೃತ್ವವು ಎಂದೂ ಕಲಂಕಿತ ವಾದುದಲ್ಲ.

ಅಮ್ಮಾ ಅದೇತಾನೆ ಕಣ್ಣುಬಿಡುತ್ತಿದ್ದ ಕಂದನಿಗೆ ವಿಶಾಲನದಿಯ ಪಾತ್ರವನ್ನು ನೀವು ತೋರಿಸಿದಿರಿ, ಬದ್ಧಮುಷ್ಟಿಯಲ್ಲಿರ ವಾಗಲೇ ಪ್ರವಾಹದ ತೆರೆಗಳಿಗೆ ಆ ಕಂದ ನನ್ನೊಪ್ಪಿಸಿದಿರಿ, ಆತ ಅಕ್ಷಮ್ಯ ಅಪರಾಧ ವನ್ನೇನಾದರೂ ಮಾಡಿದ್ದನೋ ಹೇಗೆ. ಈಗ ನೀವು ನನ್ನ ಮೇಲೆ ಅಂತಃಕರಣ ತೋರಿ ಸುತ್ತಿದ್ದಂತೆ ಆಗೇಕೆ ತೋರಿಸಲಿಲ್ಲ, ಆಗಲಿ ತಾವು ನನ್ನ ತಾಯಿ ಎಂದು ಹೇಳಿದಿರಲ್ಲವೆ?

ಹೌದು ಇದು ತ್ರಿಕಾಲಸತ್ಯ.

ಹಾಗಾದರೆ ನನ್ನೊಂದಿಗೆ ಬನ್ನಿರಿ, ನನ್ನ ಕುಟೀರಕ್ಕೆ.

ನಿರುತ್ತರಳಾದ ಕುಂತಿಯು ಬಹು ಹೊತ್ತಿನ ಮೇಲೆ ನುಡಿದಳು.

ಕರ್ಣಾ, ನಾನು ಬಹುದೊಡ್ಡ ಆಸೆ ಯನ್ನಿಟ್ಟುಕೊಂಡು ಬಂದಿದ್ದೆ.

ಈ ಕರ್ಣನು ಎಂದೂ ಯಾರನ್ನು ನಿರಾಶ ಗೊಳಿಸಲಾರ. ಹಾಗಿರುವಾಗ ತಾಯಿ ಯನ್ನು ನಿರಾಶಗೊಳಿಸಿ ಕಳುಹಿಸಲು ಸಾಧ್ಯವೆ? ನೀವು ಚಿಂತಿಸಬೇಡಿರಿ, ಮಾತೃ ಋಣಕ್ಕೆ ನಾನು ಬದ್ಧನಾಗಿರುವೆ. ಹೇ, ಯಶಸ್ವಿನೀ, ನಾನು ಕೇವಲ ಅರ್ಜುನ ನೊಂದಿಗೆ ಮಾತ್ರ ಯುದ್ಧಮಾಡುವೆ, ನಮ್ಮಿಬ್ಬರಲ್ಲಿ ಯಾರೊಬ್ಬರು ಬದುಕಿ ಉಳಿದರೂ ನಿಮ್ಮ ಐದುಮಕ್ಕಳು ನಿಮಗೆ ಉಳಿದೇ ಉಳಿಯುತ್ತಾರೆ.

ಮಗೂ ನೀನು ಎಲ್ಲವನ್ನೂ ಕೊಟ್ಟಿರುವಿ, ಆದರೆ ತಾಯಿಯಾದ ನಾನೇನೂ ನಿನಗೆ ಕೊಡಲಾರದೆ ಹೋದೆ.

ತಾಯಿ, ನಿಮ್ಮ ಆಶೀರ್ವಾದವೇ ದೊಡ್ಡದು. ಜಯದ ಅಪೇಕ್ಷೆಯಿಂದಾಗಲಿ ಯಶಸ್ಸು ಹಾಗೂ ಕೀರ್ತಿಯ ಲೋಭ ದಿಂದಾಗಲಿ ಧರ್ಮದಿಂದ ನಾನು ವಿಚಲಿತ ನಾಗಲಾರದಂತೆ ನನ್ನನ್ನು ಅನುಗ್ರಹಿಸಿ, ಆ ನಿಮ್ಮ ಅನುಗ್ರಹವೇ ನನ್ನನ್ನು ಕಾಪಾಡು ತ್ತದೆ.

ಶ್ರೀ ಆದ್ಯರಾಮಾಚಾರ್ಯ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ | ರಾತ್ರಿ 7–00 ರಿಂದ 8–00 | — |
| (ಮುಕುರ ಮಂಟಪದಲ್ಲಿ) | (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | |
| ರಾತ್ರಿ ಗಂಟೆ | ರಾತ್ರಿ ?–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

ತಾಯೀ, ದಯಮಾಡಿ ನನಗಾಗಿ ಹಿಂದು ಪ್ರಾರ್ಥನೆ ಸಲ್ಲಿಸುತ್ತೇನೆ.

ಹೇಳು ಮಗೂ.

ಯಾವಾಗ ಈ ನಿನ್ನ ಮಗನ ಪ್ರವಾಸವು ಪೂರ್ಣಗೊಳ್ಳುತ್ತದೆಯೋ, ಎಂದು ಆ ಪ್ರವಾಸದ ಕೊನೆಭಾಗವೆನಿಸುವ ಸಮುದ್ರವನ್ನು ಅವ ಕೂಡುತ್ತಾನೆಯೋ, ಅಂದುಮಾತ್ರ ಸಮಾಧಾನಚಿತ್ತದಿಂದ ನನಗಾಗಿ ಎರಡು ಕಣ್ಣೀರನ್ನು ಸುರಿಸು. ಇದೇ ನನ್ನ ಕೊನೆಯ ಪ್ರಾರ್ಥನೆ.

ಕುಂತಿಗೆ ಮುಖ ಮನಸ್ಸು ಮ್ಲಾನವಾದುವು. ಜಯ, ಅಪಜಯಗಳ ಪರಿಕಲ್ಪನೆಯ ಸಾಪೇಕ್ಷತೆಯ ಬಗ್ಗೆ ಪ್ರಶ್ನೆಗಳು ಮೂಡಿದವು. ಕರ್ಣನ ಕೊನೆಯ ಮಾತಿನಲ್ಲಿ ಭವಿಷ್ಯದ ಸೂಚನೆಯಿದ್ದಿತೇ ಎಂಬ ಅನುಮಾನ ಮೂಡಿತು. ಆದರೂ, ಅದರ ಸತ್ಯವನ್ನು ತಿಳಿಯಲು ಕರ್ಣನ ಕಣ್ಣಲ್ಲಿ ಕಣ್ಣಿಟ್ಟು ನೋಡಲು ಆಗದಷ್ಟು ಹಿಂಜರಿತವಿದ್ದಿತು. ತಾನು ಮಗನನ್ನು ನೋಡಲು ಬರುವಾಗ ಇದ್ದ ಸ್ಥೈರ್ಯ ಉಡುಗಿ ನಿಂತಲ್ಲಿಯೇ ಕುಸಿಯುವಂತೆ ಕಾಲುಗಳು ಭಾರವಾದವು. ಅವನತ ಮುಖಳಾಗಿ ನಿಂತ ಆಕೆಯನ್ನು ನೋಡುತ್ತ ಕರ್ಣನೂ ನಿಂತಿದ್ದ. ಕಾಲವೂ, ಅದನ್ನಳೆಯುವ ಸೂರ್ಯನೂ, ತಾಯಿ ಮಗನ ನಡುವೆ ಪ್ರವೇಶಿಸಿ ತಪ್ಪುಮಾಡಿದೆವೊ ಎಂಬ ಭಾವದಿಂದ ಸ್ತಬ್ಧ ಹೊಂದಿದ್ದರು.

ಯುಗವಾಯಿತೋ ಎಂಬಂತೆ ಕರ್ಣ ಎಚ್ಚೆತ್ತ. ಅವನಿಗೆ ಮೊದಲೇ ಧರ್ಮಸಂಕಟವುಂಟಾಗಿದ್ದರೂ, ಕೃಷ್ಣ ಮಾತುಗಳಿಂದ ಕದಡಿದ ಮನವನ್ನು ಏಕಾಂತದ ಚಿಂತನೆಯಿಂದ ಗಟ್ಟಿಗೊಳಿಸಿಕೊಂಡಿದ್ದ. ಕುರುಕ್ಷೇತ್ರದಲ್ಲಿ ಕೌರವನಿಗಾಗಿ ಕಾಯವೊಪ್ಪಿಸುವ ತನ್ನ ನಿರ್ಧಾರದಲ್ಲಿನ ಏಕಮುಖತೆಗೆ ಯಾವ ವ್ಯತ್ಯಯವೂ ಉಂಟಾಗದು ಎಂದೇ ಭಾವಿಸಿದ್ದ. ಆದರೆ ಇದು–ತಾಯಿಯೇ ತನ್ನ ಮುಂದೆ ನಿಂತಿರುವುದು–ಕೌರವ ಪಾಂಡವ ಶತೃತ್ವ, ಹಸ್ತಿನಾವತಿಯ ರಾಜತ್ವ, ಉಪ್ಪುತಿಂದವರ ಮನೆ ಕಾಯುವ ಕರ್ತವ್ಯ, ದುರ್ಯೋಧನನ ತನ್ನ ಸ್ನೇಹ, ದ ಮಿತಿಗಳಿಂದ ಹೊರತಾಗಿದ್ದಿತು. ಇದನ್ನು ತಾನು ಎದುರಿಸ ಬೇಕಾಗುತ್ತದೆ ಎಂದು ಅವನೂ ಊಹಿಸಿರಲಿಲ್ಲ.

ತಾಯಿಗೆ ನಮಸ್ಕರಿಸಿ ಮುನ್ನಡೆದ.



# ಪುರಂದರದಾಸರು ಕಂಡಂತೆ ರಾಗಿಯ ಸಾರ್ಥಕ್ಯ

"ಆದದ್ದೆಲ್ಲಾ ಒಳಿತೇ ಆಯಿತು, ನಮ್ಮ ಪುರಂದರ ವಿಠಲನ ಸೇವೆಗೆ ಸಾಧನ ಸಂಪತ್ತಾಯಿತು"- ಎಂದು ಹಾಡಿದ ಪುರಂದರದಾಸರ ಹಾಡಾಗಲೀ, ಪುರಂದರ ದಾಸರ ಕಥೆ, ಕನ್ನಡ ನಾಡಿನಲ್ಲಿ ಅಷ್ಟೇ ಅಲ್ಲ, ಇಡೀ ಸಂಗೀತಕ್ಷೇತ್ರದಲ್ಲೇ ಪ್ರಸಿದ್ಧಿಯಾಗಿದೆ. ಪೂರ್ವಾಶ್ರಮದಲ್ಲಿ ಜಿಪುಣಾಗ್ರೇಸರರೆಂದೇ ಖ್ಯಾತಿವೆತ್ತಿದ್ದ ಪುರಂದರದಾಸರು ಕೊನೆಗೆ ತಮ್ಮ ಎಲ್ಲಾ ಐಶ್ವರ್ಯವನ್ನೂ ಭಗವಂತನ ಹೆಸರಿನಲ್ಲಿ ದಾನಮಾಡಿ ಭಗವಂತನ ಸಂಕೀರ್ತನೆ ಮಾಡುತ್ತಾ, ಊರೂರು ಸುತ್ತುತ್ತಾ ದಾನದ ಮಹತ್ವವನ್ನು ಸಾರುತ್ತಾ, ಭಕ್ತಿ ಭಿಕ್ಷೆ ಬೇಡುತ್ತಾ ಜನರ ಮನೋಭೂಮಿ ಯಲ್ಲಿ ನೀತಿಯ, ಸದ್ಗುಣದ, ಸೌಹಾರ್ದದ, ಭಕ್ತಿಯ ಎಲ್ಲಕ್ಕೂ ಮಿಗಿಲಾಗಿ ಸನ್ನಡತೆಯ ಬೀಜ ಬಿತ್ತುವ ವ್ಯವಸಾಯವನ್ನು ಹಮ್ಮಿ ಕೊಂಡರು. 'ಉದರಂಭರಣಕ್ಕಾಗಿ' ಭಿಕ್ಷೆ ಎತ್ತುವುದಾದರೂ ಅವರಿಗೆ ಅಪಮಾನಕರ ವಲ್ಲ. ಹಾಗೂ ದಾನಿಗಳು ಏನನ್ನೇ ನೀಡಿದರೂ ಚಿಂತೆಯಿಲ್ಲ. ತಮಗೆ ದೊರೆವ ಪ್ರತಿವಸ್ತುವಿನಲ್ಲೂ ಮಹತ್ವವನ್ನು ಕಾಣುವ ಹಿರಿಯಗುಣ ಅವರಲ್ಲಿತ್ತು. ಇದಕ್ಕೆ ಅವರ ಒಂದು ಕೀರ್ತನೆ ಅತ್ಯುತ್ತಮ ನಿದರ್ಶನ ವಾಗಿದೆ. ಅದರಲ್ಲಿ ಪುರಂದರದಾಸರು ಶ್ಲೇಷೆಯ ಮೂಲಕ ಜನಗಳಿಗೆ ಸೂಕ್ತ ಮಾರ್ಗದರ್ಶನ ನೀಡಿರುವುದು ನಿಜಕ್ಕೂ ಹೃದಯಂಗಮವಾಗಿದೆ. ಅದು ಹೀಗೆ ಪ್ರಾರಂಭವಾಗುತ್ತದೆ.

'ರಾಗಿ ತಂದೀರಾ ಭಿಕ್ಷಕೆ ರಾಗಿ ತಂದೀರಾ'. ಈ ಸಾಲು ಬಹಳ ಸರಳವಾಗಿದ್ದು ಅಂಥ ವಿಶೇಷವೇನೂ ಇಲ್ಲವೆನಿಸುತ್ತದೆ. ಆದರೆ ಇದರ ಮುಂದಿನ ಸಾಲುಗಳ ಒಂದೊಂದು ಪದವೂ ದಾನದಿಂದ ನಮಗೊದಗುವ ಸತ್ಫಲವನ್ನು ಎಳೆ ಎಳೆಯಾಗಿ ಪರಿಚಯ ಮಾಡಿಕೊಡುತ್ತದೆ. ಆ ಸಾಲಿನಲ್ಲಿ ಪುರಂದರ ದಾಸರು ಮೊದಲಲ್ಲೇ-

"ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯ ವಂತರಾಗಿ ನೀವು" – ಎಂದಿದ್ದಾರೆ. ಇದು ತಮಗೆ ದೊರೆಯುತ್ತಿರುವ ವಸ್ತುವು ಅತ್ಯಮೂಲ್ಯವಾದುದೆಂಬ ತೃಪ್ತಿಯ ಜೊತೆಗೆ, ದಾನ ಮಾಡುತ್ತಿರುವವರನ್ನು ಕುರಿತು, ಜೀವನದಲ್ಲಿ ಯೋಗ್ಯರೂ, ಭೋಗ ವುಳ್ಳವರೂ, ಭಾಗ್ಯಶಾಲಿಗಳೂ ಆಗಿರಿ ಎಂಬ ಹಾರೈಕೆಯ ನುಡಿಯೂ ಆಗಿರುವಂತೆ ಭಾಸ ವಾಗುತ್ತದೆ. ಮುಂದಿನ ಸಾಲಂತೂ ಮಾನವನ ಬದುಕಿನ ಸಾರ್ಥಕತೆಗೆ ಉತ್ತೇಜನಕಾರಿಯಾಗಿದೆ.

ಅನ್ನದಾನವ ಮಾಡುವರಾಗಿ<br>
ಅನ್ನಛತ್ರವ ಇಟ್ಟವರಾಗಿ

ಈ ವಾಕ್ಯಗಳು, ನಾವು ಅಂತಹ ಕೆಲಸವನ್ನು ಮಾಡಬೇಕು ಎಂದು ಹೇಳುವುದರೊಂದಿಗೆ; ಅನ್ನದಾನವನ್ನು ಮಾಡುವವ ಹಾಗೂ ಅನ್ನ ಛತ್ರವನ್ನು ಇಟ್ಟವನೇ 'ರಾಗಿ' ಎಂದರೆ ನಿಜವಾದ ಪ್ರೀತಿ, ವಿಶ್ವಾಸವುಳ್ಳವನು ಎಂಬ ಅರ್ಥವನ್ನೂ ನೀಡುತ್ತದೆ. 'ಗಾಣಗಿತ್ತಿ ಅಯ್ಯೋ ಎಂದರೆ ನೆತ್ತಿ ತಣ್ಣಗಾಗುವುದೇ?' ಎಂಬಂತೆ ಕೇವಲ ತೋರಿಕೆಯ ಸೌಹಾರ್ದತೆ ಪ್ರಯೋಜನಕಾರಿಯಾಗದು. ನಾವು ನಿಜಕ್ಕೂ ಅನೇಕ ನಿರ್ಗತಿಕರಿಗೆ, ಬಡವರಿಗೆ ನಿಸ್ಸಹಾಯಕರಿಗೆ ಆಶ್ರಯವಾಗುತ್ತ ನಿಜಕ್ಕೆ ಇಂಥದ್ದೊಂದು ಮಹತ್ಕಾರ್ಯ ಮಾಡಬೇಕೆಂದರೆ ಅದು ಅಷ್ಟು ಸುಲಭ ಸಾಧ್ಯವಲ್ಲ. ಅದಕ್ಕಾಗಿ ಅಪಾರಸಾಧನೆ ಅಗತ್ಯ. ಆದ್ದರಿಂದ ಮುಖ್ಯವಾಗಿ ನಾವು ಮಾಡಬೇಕಾದ್ದೇನೆಂದರೆ 'ಅನ್ಯದ್ವೇಷವ ಬಿಟ್ಟವರಾಗಿ' ಬಾಳಬೇಕು. ಯಾರನ್ನೂ ದ್ವೇಷಿಸದವ ಎಲ್ಲರನ್ನೂ ಪ್ರೀತಿಸುವನು ಅಂದರೆ ತನ್ನಂತೆ ಇತರರನ್ನು ಭಾವಿಸಬೇಕು ನಿರ್ಮಲ ಮನಸ್ಸಿನಿಂದ ಇತರರ ತಪ್ಪನ್ನು ತಿದ್ದಬೇಕು. ಇತರರನ್ನು ವಿನಾ ಕಾರಣ ದ್ವೇಷಿಸಬಾರದು. ಹಾಗಲ್ಲದಿದ್ದ ನಾವು ಮಾಡುವ ದಾನ ಧರ್ಮಾದಿಗಳು ಸಹಾಯಗಳು ಕಿಂಚಿತ್ತೂ ಪ್ರಯೋಜನಕಾರಿ ಯಾಗಲಾರವು.

ಇಂಥ ಪರಿಶುದ್ಧ ಮನಸ್ಸು ನಮಗೆ ಬರ ಬೇಕಾಗಿದ್ದಲ್ಲಿ ನಾವು ಏನು ಮಾಡಬೇಕೆಂಬು ದಕ್ಕೆ ಪುರಂದರದಾಸರು 'ಅನುದಿನ ಭಜನೆಯ ಮಾಡುವರಾಗಿ' ಎಂದು ನಮ್ಮನ್ನು ನಿರ್ದೇಶಿ ಸುವುದರ ಜೊತೆಗೆ ರಾಗಿಯ ಮಹತ್ಕಾರ್ಯ ವನ್ನೂ ತಿಳಿಸಿದ್ದಾರೆ. ರಾಗಿಯಂತಹ ಧಾನ್ಯವೂ ಕೂಡ ದೈವಸ್ಮರಣೆ ಮಾಡುವುದಾ ದಲ್ಲಿ ನಾವು ಮಾನವರಾದವರು ಮತ್ತೂ ಹೀಗೆ ನಡೆದುಕೊಂಡರೂ ಸಾಲದು ಮಾನವನು ಸದಾ ಕರ್ತವ್ಯಮಗ್ನನಾಗಿ ಬೇಕು. ಅಂತಹ ಕರ್ತವ್ಯಗಳು ಅನೇಕ ಇರಬಹುದು. ಆದರೆ ಮುಖ್ಯವಾಗಿ-

'ಮಾತಾಪಿತರನು ಸೇವಿಪರಾಗಿ' ದ್ದು ಕೊಂಡು ಅವರ ಅನುರಾಗ ಆಶೀರ್ವಾದ ಗಳಿಂದ 'ಮನೆಗೆದ್ದು ಮಾರುಗೆಲ್ಲು' ಎಂಬಂತೆ ನಡೆದುಕೊಳ್ಳಬೇಕು. ಸನ್ಮಾರ್ಗಿಗಳಾಗಿ 'ಪಾಪಕಾರ್ಯವ ಬಿಟ್ಟವರಾಗಿ' ಬದುಕಿದರೆ 'ಪ್ರೀತಿಯ ಬಾಳನು ಬಾಳುವರಾಗಿ'– ಇದ್ದರೆ ನಮ್ಮ ಬದುಕು ಸಾರ್ಥಕವಾಗುತ್ತದೆ. ಮಾನವನು ತೀರಿಸಬೇಕಾದ ಋಣಗಳಲ್ಲಿ

ದಯೆ, ಕರುಣೆ, ತೋರುವುದಾದರೆ ಅದು ಕಾರ್ಯತಃ ತೀರಬೇಕಷ್ಟೆ. ಅದಕ್ಕಾಗಿ ದಾಸರ ಅಭಿಪ್ರಾಯದಂತೆ ಅನ್ನದಾನವ ಮಾಡುವುದೊಳ್ಳೆಯದು. ಇನ್ನೂ ಸಾಧ್ಯ ವಾದರೆ ತಲೆತಲಾಂತರಕ್ಕೂ ಉಳಿದು ಬರು ವಂಥ ಅನ್ನಛತ್ರವನ್ನು ಕಟ್ಟಿಸಿದರಂತೂ ಮತ್ತೂ ಯೋಗ್ಯ. ಇದೊಂದು ರೀತಿಯ ಕರ್ತವ್ಯ ಪಾಲನೆ. ಆದೂ ಅಲ್ಲದೆ ರಾಗಿ ಯಾದರೂ ಸಾಮಾನ್ಯವಾದುದಲ್ಲ. ಅದು ಅನ್ನದಾನವ ಮಾಡಿ, ಹಸಿದವರನ್ನು ತೃಪ್ತಿ ಪಡಿಸುವಂಥದ್ದು ಎಂಬುದೂ ಇಲ್ಲಿ ಧ್ವನಿತ ವಾಗಿದೆ. ಹಸಿದವನಿಗೆ ಬೇಕಾದುದು ಮುತ್ತುರತ್ನ, ವಜ್ರ ವೈಡೂರ್ಯಗಳಲ್ಲ. ಹೊಟ್ಟೆತಣಿಸುವ ಪದಾರ್ಥ ಮಾತ್ರ. ಇದು

'ಭಾರ್ಗವಿಶ್ರೀ'

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ ಪ್ರಾ 7–30 ಪ್ರಾ 8–30 |
| | | ಸಮರ್ಪಣ ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 ಪ್ರಾ 10–30 | ಪ್ರಾ 9–30 ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6–30 ರಾ 7–00 | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | ರಾ 8–45 ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಮಾತಾಪಿತೃ ಋಣವೂ ಅಡಕವಾಗಿದೆ. ಆದ್ದರಿಂದ ಅವರ ಋಣ ಧನ ಕನಕಾದಿಗಳಿಂದ, ಕಾಣಿಕೆ ಉಡುಗೊರೆಗಳಿಂದ ತೀರಿಸತಕ್ಕದ್ದಲ್ಲ. ಅದು ಅತ್ಯಂತ ಅಮೂಲ್ಯವಾದದ್ದು. ಹಾಗಾಗಿ ಅದನ್ನು ತೀರಿಸುವ ಬಗೆಯೂ ಅಷ್ಟೇ ಅಮೂಲ್ಯವಾಗಿರಬೇಕಲ್ಲವೆ? ಅದಕ್ಕಾಗಿ ನಮ್ಮ ಪರಿಶುದ್ಧವಾದ ಮಾತಾಪಿತೃ ಪ್ರೇಮ ಭಕ್ತಿಗಳ ಮೂಲಕ ನಮ್ಮ ಅಂತಃಕರಣದ ನಿಷ್ಕಲ್ಮಷವಾದ ಗೌರವ, ಆದರಗಳ ಮೂಲಕ ಈ ಋಣವನ್ನು ತೀರಿಸಬಹುದೇ ವಿನಹ, ಮತ್ಯಾವ ಆಡಂಬರ, ಡಂಭಾಚಾರ ಇಲ್ಲಿ ನಿಷ್ಪ್ರಯೋಜಕ. ಹಾಗೆಯೇ ಮಾನವನು ಸಮಾಜದ ಋಣವನ್ನು ತೀರಿಸಬೇಕಾದದ್ದು ಬಹು ಮುಖ್ಯಕಾರ್ಯ. ಯಾರಿಗೂ ಉಪಕಾರ ಮಾಡಲಿಕ್ಕೆ ಸಾಧ್ಯವಿಲ್ಲದಿದ್ದರೂ, ಅಪಕಾರ ಮಾಡದಿದ್ದರೆ ಆಯಿತು. ಅದನ್ನೇ ಪುರಂದರದಾಸರು 'ಪಾಪಕಾರ್ಯವ ಬಿಟ್ಟವರಾಗಿ' ಎಂದರೆ ಸನ್ಮಾರ್ಗಿಗಳಾಗಿ ಎಂದು ನಿರ್ದೇಶಿಸಿದ್ದಾರೆ. ಇದು ಯಾವಾಗ ಹೇಗೆ ಸಾಧ್ಯವಾಗುತ್ತದೆಂದರೆ 'ಮಾನವನ ಬದುಕಿನ ಹಾದಿಯ ಮುಳ್ಳಾಗಿರುವ ಅರಿಷಡ್ವರ್ಗಗಳನ್ನು ಗೆದ್ದಾಗ ಮಾತ್ರ. ಏಕೆಂದರೆ ಇವು ಮಾನವನ (ಬದುಕಿಗೆ) ಉದ್ಧಾರಕ್ಕಾಗಿ ಎಂದೂ ಪ್ರೇರಕಗಳಲ್ಲ. ಬದಲಾಗಿ ಮಾನವನ ಬದುಕಿಗೆ ಮಾರಕ. ಆದ್ದರಿಂದ ಅವುಗಳನ್ನು ಬಿಟ್ಟರೇನೇ ಬದುಕಿನ ಹಾದಿ ಸುಗಮ. ಇಲ್ಲದಿದ್ದಲ್ಲಿ ದುರ್ಗಮ. ಆದರೆ ಎಲ್ಲಕ್ಕೂ ಮೂಲವೆಂದರೆ 'ರಾಮನಾಮವ ಜಪಿಸು'ವುದು, 'ಪುರಂದರ ವಿಠಲನ ನೆನೆ'ವುದು. ಇಲ್ಲದಿದ್ದರೆ ನಾವು ಏನು ಮಾಡಲೂ ಸಾಧ್ಯವಾಗದು. 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲ ವೊಂದಿದ್ದರೆ ಸಾಕೊ' ಎಂಬಂತೆ ದೈವನಾಮ ಸ್ಮರಣೆ, ಸಂಕೀರ್ತನೆಯೇ ನಮ್ಮ ಎಲ್ಲಾ ದುಃಂತಗಳನ್ನೂ ನಿವಾರಿಸುತ್ತದೆ. ಅದೇ ನಮ್ಮ ಬಾಳ ಶಿಖರಾರೋಹಣಕ್ಕೆ ಅಗತ್ಯವಾದ ಸೋಪಾನ. ಇಂಥ ಔನ್ನತ್ಯಕ್ಕೇರಿದ ಬದುಕು ಒಂದು ವಿಶಿಷ್ಟ ಕಳೆಯನ್ನೂ ಹೊಂದುತ್ತದೆ.

ಹೀಗೆ ಎಲ್ಲಾ ಆದರ್ಶಗಳ ಹೊರೆ ಹೊತ್ತು ನಾವು ಒಂದೇ ನಿಷ್ಠೆಯಿಂದ ನಡೆಸುಕೊಂಡರೆ, ಯೋಗ್ಯರೂ, ಭೋಗ್ಯರೂ, ಭಾಗ್ಯವಂತರೂ ಆಗುವುದರಲ್ಲಿ ಸಂಶಯವೇ ಇಲ್ಲ.



# ಜ್ಞಾನಪೀಠ ಪ್ರಶಸ್ತಿ ವಿಜೇತ

# ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್

# ಅವರ ನಿಧನ

ಕನ್ನಡದ ಆಸ್ತಿಯೆಂದೂ ಕನ್ನಡದ ಸಣ್ಣಕಥೆಗಳ ಜನಕ ಎಂದೂ ಕನ್ನಡಿಗರ ಹಿರಿಯಣ್ಣನೆಂದೂ ಹೆಸರುಗಳಿಸಿ ಮುಕ್ಕಾಲು ಶತಕಕ್ಕೂ ಮೀರಿ ಕನ್ನಡದ ನಾಡು ನುಡಿ ಸೇವೆಯಲ್ಲಿ ಗಂಧದ ಕೊರಡಿನಂತೆ ಸವೆದ ಶ್ರೀ ನಿ ವಾ ಸ ಕಾ ವ್ಯ ನಾ ಮ ದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು 1986ರ ಜೂನ್ 6 ರಂದು ಪ್ರಾತಃಕಾಲ ನಿಧನ ರಾದರೆಂದು ತಿಳಿಸಲು ವಿಷಾದವಾಗುತ್ತದೆ.

1984 ರಲ್ಲಿ ಜ್ಞಾನಪೀಠಪ್ರಶಸ್ತಿಯನ್ನೂ (ಚಿಕವೀರರಾಜೇಂದ್ರ ಕಾದಂಬರಿ) 1968ರಲ್ಲಿ ಸಾಹಿತ್ಯ ಅಕ್ಯಾಡಮಿ ಪ್ರಶಸ್ತಿಯನ್ನೂ (ಸಣ್ಣ ಕಥೆಗಳು 12–13) ಪಡೆದಿದ್ದ ಮಾಸ್ತಿಯವರು ಕೋಲಾರ ಜಿಲ್ಲೆಯ ಮಾಸ್ತಿ ಗ್ರಾಮದಲ್ಲಿ ಹುಟ್ಟಿ, ಹುಂಗೇನಹಳ್ಳಿ, ಶಿವಾರಪಟ್ಟಣ, ಮೈಸೂರು, ಮದರಾಸುಗಳಲ್ಲಿ ವಿದ್ಯಾಭ್ಯಾಸ ಮಾಡಿ ಅಂದಿನ ಮೈಸೂರು ಸಂಸ್ಥಾನ ದಲ್ಲಿ ಕೆಲಸಕ್ಕೆ ಸೇರಿದ್ದು 1943 ರ ಹೊತ್ತಿಗೆ ನಿವೃತ್ತರಾದರು. ಆಂಗ್ಲ ಭಾಷೆಯಲ್ಲಿ ಎಂ. ಎ. ಪಡೆದರೂ ಅವರು ಬರೆದದ್ದು ಕನ್ನಡದಲ್ಲಿಯೇ. ತಮಿಳು ಮಾತೃಭಾಷೆಯ ಮಾಸ್ತಿ ಕನ್ನಡದಲ್ಲಿ ಬರೆಯತೊಡಗಿದ್ದು ಕನ್ನಡಕ್ಕೇ ಶೋಭೆಯನ್ನುಂಟುಮಾಡುವ ಶಿಷ್ಟ ಸಾಹಿತ್ಯವನ್ನು ತಂದು ಕೊಟ್ಟಿತು ಎನ್ನಬಹುದು. 1920 ರಲ್ಲಿ 'ಕೆಲವು ಸಣ್ಣ ಕಥೆಗಳು' ಕೃತಿ ಯಿಂದ ಆರಂಭಿಸಿದ ಸಾಹಿತ್ಯಸೇವೆ ನಿರಂತರವಾಗಿ 1986 ರ ವರೆಗೂ ಸಾಗಿತು. ಈ ನಡುವೆ 17 ಸಣ್ಣಕಥೆಗಳ ಸಂಕಲನಗಳು, 18 ನಾಟಕ ಗಳು, 17 ಕವನ ಸಂಕಲನಗಳೂ, ಹೀಗೆಯೇ 118ಕ್ಕೂ ಮಿಕ್ಕಿದ ಕೃತಿ ಗಳನ್ನು ಅವರು ಪ್ರಕಟಿಸಿದರು. ಮೂರು ಕಾದಂಬರಿಗಳೂ, ಹಲವಾರು ವಿಮರ್ಶಾಕೃತಿಗಳೂ ಈ ಹಿರಿಯಣ್ಣನ ಲೇಖನಿಯಿಂದ ಹೊರಬಂದವು. ಕಾಕನಕೋಟೆ ನಾಟಕ ಚಲನಚಿತ್ರವಾಗಿ ಜನದ ಮೆಚ್ಚುಗೆಯನ್ನೂ ಪಡೆಯಿತು

ಮುಖ್ಯವಾಗಿ ಅವರ ಶ್ರೀರಾಮಪಟ್ಟಾಭಿಷೇಕ (ನಾಟಕ) ಆದಿ ಕವಿವಾಲ್ಮೀಕಿ (ವಿಮರ್ಶೆ) ಭಾರತತೀರ್ಥ (ವಿಮರ್ಶೆ) ಗಳು ಅವರ ದೃಷ್ಟಿ ಬಾಹುಳ್ಯವನ್ನೂ ಧಾರ್ಮಿಕ ಸಾಂಸ್ಕೃತಿಕ ಹಿರಿಮೆಯನ್ನೂ ಪ್ರತಿಬಿಂಬಿಸುವಂತಿದ್ದು, ವಾಲ್ಮೀಕಿ ವ್ಯಾಸರ ಕಾವ್ಯಪ್ರತಿಭೆಗೆ, ಧರ್ಮ ಪ್ರಜ್ಞೆಗೆ ಎತ್ತಿದ ಆರತಿಯಂತೆ ಶೋಭಾಯಮಾನವಾಗಿವೆ.

1891 ರಲ್ಲಿ ಹುಟ್ಟಿದ ಮಾಸ್ತಿಯವರು ಸರ್ಕಾರಿ ಅಧಿಕಾರಿ ಗಳಾಗಿ ಮಾತ್ರವೇ ಅಲ್ಲ, ಸಂಪಾದಕರಾಗಿಯೂ ಸಮರ್ಥರೆಂಬ ಹೆಸರು ಗಳಿಸಿದ್ದರು. ಜೀವನ ಮಾಸಪತ್ರಿಕೆಯ ಸಂಪಾದಕರಾಗಿ ಪತ್ರಿಕೋದ್ಯಮಿ ಗಳಿಗೂ ಆದರ್ಶಪ್ರಾಯರಾಗಿದ್ದರು. ಜಿ. ಪಿ. ರಾಜರತ್ನಂ, ಡಾ॥ ಜಿ. ಎಸ್. ಶಿವರುದ್ರಪ್ಪ, ರಾಮಚಂದ್ರಶರ್ಮ ಮೊದಲಾದ ಅನೇಕರು ಜೀವನದಿಂದಲೇ ತಮ್ಮ ಸಾಹಿತ್ಯಜೀವನವನ್ನು ಆರಂಭಿಸಿದರು. ಅವರು ತಾವು ಬರೆದ ಸಾಹಿತ್ಯದಷ್ಟೇ ಉತ್ತಮ, ಅಭಿರುಚಿಯ, ಸಂಸ್ಕೃತಿಯ ಸಾಹಿತ್ಯವನ್ನೂ ಪ್ರೋತ್ಸಾಹಿಸಿದರು.

ಸಾಹಿತ್ಯದ ಸರ್ವ ಪ್ರಕಾರಗಳಲ್ಲೂ ಕೆಲಸ ಮಾಡಿದ ಮಾಸ್ತಿ ಯವರು ಮೂಲತಃ ಕಥೆಗಾರರು. ಓದುಗರಿಗೆ ಮನ ಮುಟ್ಟುವಂತೆ ಸರಳವಾಗಿ, ಸ್ಪಷ್ಟವಾಗಿ ಹೇಳುವುದರಲ್ಲಿ ಅವರಿಗೆ ಪ್ರೀತಿ. 18 ನೇ ಶತಮಾನದ ಕೊಡಗಿನ ರಾಜಕೀಯವನ್ನು ವಿವರಿಸುವ ಅವರ ಚಿಕವೀರ ರಾಜೇಂದ್ರ ಕಾದಂಬರಿಯಲ್ಲೂ ಇದೇ ಗುಣಕ್ಕೆ ಒತ್ತು ನೀಡಲಾಗಿದೆ. 'ಅದು ಕೇವಲ ಕೊಡಗಿನ ಚರಿತ್ರೆಯೇ ಅಲ್ಲ. 18ನೇ ಶತಕದ ಪ್ರಾಚ್ಯ ಪಾಶ್ಚಾತ್ಯ ರಾಜಕೀಯ ಸಾಂಸ್ಕೃತಿಕ ಪರಿಸ್ಥಿತಿಗಳಿಗೆ ಕನ್ನಡಿ ಹಿಡಿದ ಕೃತಿ' ಎಂದು ಜ್ಞಾನಪೀಠ ಪ್ರಶಸ್ತಿಯ ಒಕ್ಕಣೆಯಾದರೂ ಅಲ್ಲಿಯೂ ಉದ್ವೇಗದ, ಆವೇಶದ ಆಕ್ರಂದನವಿಲ್ಲ, ದೌಷ್ಟ್ಯವನ್ನು ಮರ್ಯಾದೆಯ ಮಿತಿಯಲ್ಲಿ, ಕ್ರೌರ್ಯ, ಭರ್ತ್ಸನೆಗಳನ್ನೂ ಸಭ್ಯತೆಯಿಂದ ಚಿತ್ರಿಸಿದ ಹಿರಿಮೆ ಅವರದು. ನೈತಿಕ ಮೌಲ್ಯಗಳ ಅವಧಾರಣೆ, ಸಂವಹನ ಶೀಲತೆಗಳು ಅವರ ಎಲ್ಲ ಕೃತಿಗಳ ಹಿರಿಮೆಯೆನ್ನಬೇಕು. ಠಾಕೂರರ ಗೀತಾಂಜಲಿ, ಮಾರ್ಕಸ್ ಅರೀಲಿಯಸ್‌ನ ತತ್ತ್ವಜ್ಞಾನ, ಡೇವಿಡ್ ಮಹಾರಾಜನ ಜೀವನ ಎಲ್ಲವನ್ನೂ ಭಾರತೀಯತೆಯ ಹಿನ್ನೆಲೆಯಲ್ಲಿ ನೋಡಿ ವಿಶ್ವಮಾನವ ಗುಣವನ್ನು ಮೆಚ್ಚುವ ಬಗೆ ಅವರದು. ಆಳ್ವಾರು ಗಳನ್ನೂ, ಗಯಟೆಯನ್ನೂ ಒಟ್ಟಿಗೆ ಮೆಚ್ಚುವ ಅವರ ಮನ ಮುದ್ದಣನಿಗೂ ಪುರಂದರದಾಸರಿಗೂ ಬಹಳ ಹತ್ತಿರವಾದದ್ದು. ಎಲ್ಲವನ್ನೂ ನಮ್ಮವರು– ಕನ್ನಡಿಗರು ತಿಳಿದು ದೊಡ್ಡವರಾಗಬೇಕು ಎಂಬ ಆಸಕ್ತಿ.

ಶ್ರೀಯುತರು ಷೇಕ್ಸ್‌ಪಿಯರನನ್ನೂ ಅನುವಾದ ಮಾಡಿದ್ದಾರೆ- ಕನ್ನಡಪ್ರಭ ಸಂಪಾದಕ ಶ್ರೀ ಖಾದ್ರಿಶಾಮಣ್ಣನವರು ಹೇಳಿದಂತೆ "ಡಾ॥ ಮಾಸ್ತಿಯವರು ಭಾರತೀಯ ಸಂಸ್ಕೃತಿಯ ಹಿರಿಮೆಯೆಲ್ಲದರ ಪ್ರತೀಕ. ಪ್ರಾಚೀನರಂತೆ ಕಂಡರೂ ಆಧುನಿಕತೆಯನ್ನು ಹದವಾಗಿ ಮೈಗೂಡಿಸಿಕೊಂಡವರು. ಹಳೆಯದನ್ನು ತೊರೆಯದೆಯೇ ಹೊಸ ವಿಚಾರಗಳಿಗೆ ಮೆರುಗು ಕೊಡಬಹುದೆನ್ನಲು ಅವರೇ ಜೀವಂತ ಸಾಕ್ಷಿ".

ಇಂಥ ಹಿರಿಯ ಚೇತನ ಇನ್ನಿಲ್ಲವೆನ್ನುವುದರಿಂದ ಸಾಹಿತ್ಯಾಕಾಶದ ನೀರವತೆ ಹೆಚ್ಚಾಯಿತೆನ್ನಬೇಕು.



## ಗಜೇಂದ್ರಗಢದಲ್ಲಿ ದಾಸಸಾಹಿತ್ಯೋತ್ಸವ

ತಿರುಮಲೆ–ತಿರುಪತಿ ದೇವಸ್ಥಾನದ ದಾಸ–ಸಾಹಿತ್ಯ ಪ್ರಾಜೆಕ್ಟ್‌ನವರು ಗಜೇಂದ್ರಗಢದಲ್ಲಿ ವ್ಯವಸ್ಥೆ ಗೊಳಿಸಿದ ದಾಸಸಾಹಿತ್ಯ ಸಾಹಿತ್ಯೋತ್ಸವವನ್ನು ಪದ್ಮಭೂಷಣ ಡಾ॥ ಎಂ. ಡಿ ಮೋದಿ ಯವರು ತಾ॥ 8–6–1986 ರಂದು ಬೆಳಗ್ಗೆ ಜಗದಾಂಬಾ ಕಲ್ಯಾಣ ಮಂಟಪದಲ್ಲಿ ಉದ್ಘಾಟಿಸಿದರು. ಉದ್ಘಾಟನಾ ಭಾಷಣದಲ್ಲಿ ಶ್ರೀ ಮೋದಿ ಯವರು ಮಾತನಾಡುತ್ತ "ಪುರಂದರ ದಾಸರು, ಕನಕದಾಸರು ತೋರಿಸಿಕೊಟ್ಟ ಹಾದಿಯಲ್ಲಿ ಕ್ರಿಯಾಶೀಲರಾಗಿ ಜನ ದುಡಿಮೆಯಲ್ಲಿ ತೊಡಗಬೇಕೆಂದೂ ಸಂಸ್ಕಾರನ್ನು ಉದ್ದೀಪನಗೊಳಿಸಬೇಕೆಂದು'' ನುಡಿದರು.

ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಭೂಮರೆಡ್ಡಿ ಯವರು ಮಾತನಾಡಿ ತಿರುಮಲೆ–ತಿರುಪತಿ ದೇವಸ್ಥಾನದ ದಾಸಸಾಹಿತ್ಯ ಪ್ರಾಜೆಕ್ಟ್‌ನವರು ನಡೆಸುತ್ತಿರುವ ಈ ಕಾರ್ಯಕ್ರಮ ನಮ್ಮ ಜನಾಂಗದ ಕಣ್ಣು ತೆರೆಸುವಂತಹುದು ಎಂದರು.

ಪಂಡಿತ ಪಂಢರೀನಾಥಾಚಾರ್ಯ ಗಲಗಲಿ ಯವರು ಮಾತನಾಡಿ ಅಂತರಂಗದ ದೃಷ್ಟಿ ಮುಖ್ಯ, ದಾಸನುಡಿಗಳು ಅಂತರಂಗದ ಪೊರೆಯನ್ನು ಕಳಚಿ ಹೊಸದೃಷ್ಟಿ ನೀಡಬಲ್ಲದು ಎಂದರು.

ದಾಸ ಸಾಹಿತ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿಗಳಾದ ಶ್ರೀ ಅಪ್ಪಣ್ಣಾಚಾರ್ಯರು ನಾಡಿನ ಎಲ್ಲ ಭಜನಾ ಮಂಡಳಿಗಳನ್ನು ದಾಸಸಾಹಿತ್ಯ ಪ್ರಾಜೆಕ್ಟ್‌ನ ಪರವಾಗಿ ತಿರುಪತಿಗೆ ಸ್ವಾಗತಿಸಿದರು. ದಾಸಸಾಹಿತ್ಯ ಪ್ರಾಜೆಕ್ಟ್‌ನ ಪರವಾಗಿ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ ಯವರು ಅತಿಥಿಗಳನ್ನು ಸ್ವಾಗತಿಸಿದರು.

ಮಧ್ಯಾಹ್ನ ದಾಸದರ್ಶನ ಸಮಿತಿ ಹಾಗೂ ಅಬ್ಬಿಗೇರಿಯ ಭಜನಾ ಮಂಡಳಿ ಹಾಗೂ ಅನೇಕ ಮಂಡಳಿಗಳು ಸಂಯುಕ್ತವಾಗಿ ಏರ್ಪಡಿಸಿದ್ದ ಅಭೂತಪೂರ್ವ ಮೆರವಣಿಗೆಯಲ್ಲಿ ವೆಂಕಟೇಶ್ವರಸ್ವಾಮಿಪ್ರತಿಮೆಯನ್ನು ಗಜೇಂದ್ರಗಢದ ಸಹಸ್ರಾರು ಜನ ಭಕ್ತಿ ಶ್ರದ್ಧೆಗಳಿಂದ ವೀಕ್ಷಿಸಿದರು.

ಸಂಜೆ ಭೂಮರೆಡ್ಡಿ ಹೈಸ್ಕೂಲಿನಲ್ಲಿ ನಡೆದ ಬಹಿರಂಗ ಅಧಿವೇಶನದಲ್ಲಿ ಶಾಸಕ ಜ್ಞಾನದೇವ ದೊಡ್ಡಮೇಟಿಯವರು ದಾಸಸಾಹಿತ್ಯ ಪ್ರದರ್ಶನ ಉದ್ಘಾಟನೆ ಮಾಡಿದರು. ಆಂಧ್ರ ಕರ್ನಾಟಕಗಳ ಸಾಂಸ್ಕೃತಿಕ ಬಾಂಧವ್ಯ ಕುರಿತು ಮಾತನಾಡಿದ ಶಾಸಕರು ಹರಿದಾಸರ ಮಹತ್ತ್ವವನ್ನು ಸಾರಿದರು. ಸಭೆಯಲ್ಲಿ ಖ್ಯಾತ ಸಾಹಿತಿಗಳಾದ ಶ್ರೀ ಅದ್ಯರಾಮಾಚಾರ್ಯ ವಿದ್ವಾಂಸರಾದ ಶ್ರೀ ಪಂಢರೀನಾಥಾಚಾರ್ಯ ಗಲಗಲಿ ಮಾತನಾಡಿದರು.

ರಾತ್ರಿ ಧಾರವಾಡದ ವೆಂಕಟೇಶ್ವರ ಭಜನಾ ಮಂಡಳಿಯವರಿಂದ ಭಜನೆ ಹಾಗೂ ಶ್ರೀ ಭದ್ರಗಿರಿ ಅಚ್ಯುತದಾಸರಿಂದ ಹರಿಕಥೆ ನಡೆದವು.

ಎರಡನೆಯದಿನ ಶ್ರೀ ಪಂಢರೀನಾಥಾಚಾರ್ಯ ಗಲಗಲಿಯವರಿಂದ ಬೆಳಗ್ಗೆ ಪ್ರವಚನ, ಹಾಗೂ ಶ್ರೀ ಭದ್ರಗಿರಿ ಅಚ್ಯುತದಾಸ ರಿಂದ ಸಂಜೆ ಭಕ್ತ ಸುಧಾಮ ಹರಿಕಥೆಗಳು ನಡೆದವು. ಖ್ಯಾತ ಸಾಹಿತಿಗಳಾದ ಶ್ರೀ ಅದ್ಯರಾಮಾಚಾರ್ಯ ರಿಂದ ಗಜೇಂದ್ರಗಢದ ಇತಿಹಾಸ ಹಾಗೂ ಪ್ರಸನ್ನ ವೆಂಕಟದಾಸರನ್ನು ಕುರಿತು ಉಪನ್ಯಾಸ ನಡೆಯಿತು.

ದಾಸ ಸಾಹಿತ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿಗಳಾದ ಶ್ರೀ ಅಪ್ಪಣ್ಣಾಚಾರ್ಯರಿಂದ ಗಜೇಂದ್ರಗಢಕ್ಕೂ ಹಾಗೂ ಹರಿದಾಸ ಸಾಹಿತ್ಯಕ್ಕೂ ಇರುವ ಸಂಬಂಧದ ಹಿನ್ನೆಲೆಯಲ್ಲಿ ಪ್ರವಚನ ನಡೆಯಿತು. ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರಿಂದ ಶ್ರೀಪಾದರಾಜರು ಹಾಗೂ ಹರಿದಾಸಪರಂಪರೆ ಎನ್ನುವ ವಿಷಯವಾಗಿ ಪ್ರವಚನ ನಡೆಯಿತು.

ನಗರ ಸಭಾಧ್ಯಕ್ಷರಾದ ಶ್ರೀ ಅಶೋಕ ಅವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ದಾಸಸಾಹಿತ್ಯ ಪ್ರಾಜೆಕ್ಟ್‌ನವರು (ತಿರುಮಲೆ–ತಿರುಪತಿ ದೇವಸ್ಥಾನಗಳು) ಅಬ್ಬಿಗೇರಿಯ ಭಜನಾ ಮಂಡಳಿಯ ಎಲ್ಲ ಸದಸ್ಯರಿಗೂ ಸನ್ಮಾನಮಾಡಿ ಶ್ರೀನಿವಾಸನ ಅನುಗ್ರಹ ರೂಪದಲ್ಲಿ ನೀಡಿ ಸತ್ಕರಿಸಿದರು. ಬೆಳಗ್ಗೆ ಅಬ್ಬಿಗೇರಿ ಭಜನಾ ಮಂಡಳಿಯವರಿಂದ ಭಜನಾ ಕಾರ್ಯಕ್ರಮ ನಡೆಯಿತು.

ಮೂರನೇ ದಿನ ಬೆಳಗ್ಗೆ ಶ್ರೀಪಂಢರೀನಾಥಾಚಾರ್ಯ ಗಲಗಲಿ, ಶ್ರೀ ಅದ್ಯರಾಮಾಚಾರ್ಯರ ಉಪನ್ಯಾಸಗಳೂ, ಸಂಜೆ ಶ್ರೀ ಮಾಧವಗುಡಿಯವರಿಂದ ಸಂಗೀತ, ಗಜೇಂದ್ರಗಢದ ಗುರುಜಗನ್ನಾಥ ಪರಂಪರೆಯ ಭಜನಾಮಂಡಳಿಯವರಿಗೆ ಸನ್ಮಾನ ನಡೆದು, ಶ್ರೀ ಭದ್ರಗಿರಿ ಅಚ್ಯುದಾಸರ ಹರಿಕಥೆ ನಡೆಯಿತು.

## ಅನ್ನಮಾಚಾರ್ಯ ಪ್ರಾಜೆಕ್ಟಿಗೆ ಶತಾವಧಾನಿ ಶ್ರೀ ಮೇಡಸಾನಿ ಮೋಹನ್

ಅನ್ನಮಾಚಾರ್ಯರ ಸಂಕೀರ್ತನೆಗಳ ಪ್ರಸಾರೋದ್ದೇಶದ ತಿ. ತಿ. ದೇ ಗಳ ಅನ್ನಮಾಚಾರ್ಯ ಪ್ರಾಜೆಕ್ಟಿಗೆ ಹೊಸ ವಿಶೇಷಾಧಿಕಾರಿಯಾಗಿ ಶತವಧಾನಿ ಶ್ರೀ ಮೇಡಸಾನಿ ಮೋಹನ್ ಅವರನ್ನು ನಿಯಮಿಸಲಾಗಿದೆ. ಅನ್ನಮಾಚಾರ್ಯ ಪ್ರಾಜೆಕ್ಟ್‌ನಲ್ಲೇ ಮೊದಲಿಗೆ ಸಂಶೋಧನ ಸಹಾಯಕರಾಗಿ ಕೆಲಸ ನಿರ್ವಹಿಸಿದ ಶ್ರೀಯುತರು ಅನ್ನಮಾಚಾರ್ಯರ ಕೃತಿಗಳ ಬಗ್ಗೆ ವಿದ್ವತ್ಪ್ರಬಂಧ ವನ್ನೂ ರಚಿಸಿದ್ದಾರೆ. ಈ ಮಧ್ಯೆ ಶ್ರೀಯುತರು ಸಪ್ತಗಿರಿಯ ತೆಲುಗು ವಿಭಾಗದಲ್ಲಿ ಉಪಸಂಪಾದಕರಾಗಿ ಕೆಲಸ ನಿರ್ವಹಿಸುತ್ತಿದ್ದರು.

## ಅನ್ನದಾನ ಯೋಜನೆಗೆ ಹೊಸದತ್ತಿ

ಬೊಂಬಾಯಿಯ ಛಬೀರಾ ಛಾರಿಟಿ ಟ್ರಸ್ಟ್ ನವರಿಂದ ಹತ್ತು ಲಕ್ಷರೂಗಳ ದತ್ತಿ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಗೆ ಸಂದಿದೆ. ಇದರಿಂದಾಗಿ ಇದುವರೆಗೆ ಬಂದ ಒಟ್ಟು ದತ್ತಿ ಎಂಬತ್ತು ಲಕ್ಷರೂಗಳಾಗಿವೆ. ದತ್ತಿಗೆ ಸಮನಾದ ಹಣವನ್ನು ತಿ. ತಿ ದೇ. ಗಳೂ ನೀಡಿ ಒಟ್ಟು ಹಣವನ್ನು ಬ್ಯಾಂಕಿನಲ್ಲಿ ಠೇವಣಿಯಿಟ್ಟು, ಬರುವ ಬಡ್ಡಿಯಿಂದ ತಿರುಮಲೆಯ ಯಾತ್ರಿಕರಿಗೆ ಉಚಿತವಾಗಿ ಭೋಜನ ಸೌಕರ್ಯವೊದಗಿಸುವ ಈ ಯೋಜನೆ 1985 ರ ಏಪ್ರಿಲ್ 6 ರಂದು ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರಿಂದ ಉದ್ಘಾಟಿತವಾಯಿತು ಎಂಬುದನ್ನಿಲ್ಲಿ ನೆನೆಯಬಹುದು.

## ತಿರುಪತಿಯಲ್ಲಿ ತ್ಯಾಗರಾಜಸ್ವಾಮಿ ಆರಾಧನೆ

ತಿರುಪತಿಯ ಶ್ರೀ ತ್ಯಾಗರಾಜಸ್ವಾಮಿ ಮಂದಿರದಲ್ಲಿ ಸ್ಥಳೀಯ ಶ್ರೀ ತ್ಯಾಗರಾಜ ಟ್ರಸ್ಟ್ ಹಾಗೂ ಉತ್ಸವ ಸಮಿತಿಯಿಂದ 41 ನೇ ಬಾರಿಯ ಆರಾಧನಾ ಉತ್ಸವಗಳು 21-6-86 ರಿಂದ 27-6-86 ರ ವರೆಗೆ ಏಳುದಿನಗಳ ಕಾಲ ನಡೆದು ಯಶಸ್ವಿಯಾದವು.

21–6–86 ರ ಸಂಜೆ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ಅಧ್ಯಕ್ಷತೆಯಲ್ಲಿ ಶ್ರೀ ಸಿ. ವಿ. ನರ

ಸಿಂಹನ್ ಅವರು ಉತ್ಸವಗಳನ್ನು ಉದ್ಘಾಟಿಸಿದರು. ಸಮಿತಿಯ ಕಾರ್ಯದರ್ಶಿ ಶ್ರೀ ಎಂ. ಕೃಷ್ಣ ಸ್ವಾಮಿ ಅವರು ಸ್ವಾಗತಿಸಿದರು. ಅಧ್ಯಕ್ಷಭಾಷಣ ಮಾಡುತ್ತ ಶ್ರೀಲಕ್ಷ್ಮೀನಾರಾಯಣ ಅವರು ಸಂಗೀತ ಹೆಚ್ಚಿನ ಕಾಲ ನಿಲ್ಲುವಂತಹ ಗುಣವನ್ನು ಪಡೆದಿರುವುದೆಂದೂ, ಸಧ್ಯದ ಗೊಂದಲದ ಗದ್ದಲದ ವಾತಾವರಣದಿಂದ ಬಿಡುಗಡೆ ಹೊಂದಿ ರಾಷ್ಟ್ರೀಯ ಏಕತೆಯತ್ತ ನಡೆಯಲು ಇಂತಹ ಉತ್ಸವಗಳು ಹೆಚ್ಚು ಹೆಚ್ಚು ನಡೆಯಬೇಕೆಂದೂ ಸೂಚಿಸಿದರು. ಸಮಿತಿಯ ಛೇರ್ಮನ್ ಶ್ರೀ ಕೆ. ವಿ. ಸುಬ್ರಹ್ಮಣ್ಯಂ ಅವರು ವಂದನಾರ್ಪಣೆ ಮಾಡಿದರು.

23-6-86 ರಂದು ತಿ. ತಿ. ದೇ. ಗಳ ಮಾಜಿ ಅಧ್ಯಕ್ಷ ಡಾ॥ ಸಿ. ಅನ್ನಾರಾವ್ ಅವರು ಈ ಹಿಂದೆ ಟ್ರಸ್ಟ್ ಹಾಗೂ ಸಮಿತಿಗೆ ಗಮನಾರ್ಹಸೇವೆ ಸಲ್ಲಿಸಿ ದಿವಂಗತರಾದ ಸರ್ವಶ್ರೀ ಪಿ. ಕೆ. ವಿಜಯ ರಾಘವನ್, ಪಿ. ಮುನಿರೆಡ್ಡಿ, ಕೆ. ಎಲ್. ಸಂಪತ್ಕು ಮಾರಾಚಾರ್ಯ ಅವರುಗಳ ತೈಲಚಿತ್ರಗಳನ್ನು ಅನಾವರಣ ಮಾಡಿದರು.

24 – 6 – 86 ರಂದು ಖ್ಯಾತ ಮೃದಂಗ ವಿದ್ವಾಂಸ ಶ್ರೀ ಸಿ. ಎಸ್ ಮುರುಘ ಭೂಪತಿಯ ವರಿಗೆ "ಸಪ್ತಗಿರಿ ಸಂಗೀತ ವಿದ್ವನ್ಮಣಿ" ಎಂಬ ಬಿರುದನ್ನು ಸಮಿತಿಯ ಪರವಾಗಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣ ಅವರು ನೀಡಿದರು. ಸರ್ವಶ್ರೀ ಟಿ ಎಸ್. ಶೇಷಗೋಪಾಲನ್, ಶಾಸ್ತ್ರಿ, ಎಸ್. ಆರ್. ಜಾನಕೀರಾಮನ್, ಎಂ. ಕೃಷ್ಣಸ್ವಾಮಿಯವರು ಗಳು ಶ್ರೀ ಮುರುಘಭೂಪತಿಯವರ ವಿದ್ವತ್ತು ಪ್ರತಿಭೆಗಳನ್ನು ಕುರಿತು ಮಾತನಾಡಿದರು. ನಂತರ ಶ್ರೀ ಮುರುಘಭೂಪತಿಯವರ ಮೃದಂಗ ಸಭೆಯಲ್ಲಿ ಶ್ರೀ ಟಿ. ಎಸ್. ಶೇಷಗೋಪಾಲನ್ ಅವರ ಹಾಡುಿಕೆಗೆ ಶ್ರೀ ಕೆ. ಅಳಗಿರಿಸ್ವಾಮಿ ಅವರು ವಯೋಲಿನ್, ಶ್ರೀರಾಮನಾಥನ್ ಕಂಜಿರ ದಲ್ಲೂ ಜೊತೆನೀಡಿದರು.

26-6-86 ರಂದು ಉತ್ಸವ ಸಮಿತಿಯ ಸಂಸ್ಕ ರಣ ಸಂಚಿಕೆ ಪ್ರಕಟವಾಯಿತು. ಎಲ್ಲ ದಿನಗಳಲ್ಲೂ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪ ಡಿಸಲಾಗಿದ್ದಿತು. ಮೊದಲನೆಯದಿನ ಶ್ರೀ ರವಿ ಕಿರಣ್ ವೃಂದದವರಿಂದ ಗೋಟುವಾದ್ಯ, ಎರಡ ನೆಯದಿನ ಶ್ರೀ ರಮಣಿ ವೃಂದದವರಿಂದ ಕೊಳಲು, ಮೂರನೆಯದಿನ ಶ್ರೀ ಟಿ. ಲೋಕನಾಥನ್ ವೃಂಡ ವರಿಂದ ಗಾಯನ, ನಾಲ್ಕನೆಯದಿನ ಶ್ರೀ ಟಿ. ಎಸ್ ಶೇಷಗೋಪಾಲನ್ ವೃಂದದವರಿಂದ ಗಾಯನ, ಐದನೆಯದಿನ ಮಾಸ್ಟರ್ ಯು. ಶ್ರೀನಿವಾಸ್ ಅವರ ಮೆಂಡೋಲಿನ್, ಆರನೆಯದಿನ ಶ್ರೀಮತಿ ಲಕ್ಷ್ಮಿ ಅವರಿಂದ ಹರಿಕಥೆ, ಹಾಗೂ ಏಳನೆಯದಿನ ಶ್ರೀಮತಿ ಚಿತ್ರಾ ವಿಶ್ವೇಶ್ವರನ್ ಅವರಿಂದ ಭರತ ನಾಟ್ಯಗಳು ನಡೆದವು.

## ತಿರುಪತಿಯಿಂದ ಕರ್ನಾಟಕಕ್ಕೆ ಹೆಚ್ಚಿನ ಬಸ್‌ಗಳು

ಕರ್ನಾಟಕದ ವಿವಿಧ ಭಾಗಗಳಿಂದ ತಿರುಪತಿಗೆ ಬರುವ ಯಾತ್ರಿಕರ ನೇರ ಪ್ರಯಾಣಕ್ಕೆ ಅನುಕೂಲ ವಾಗುವಂತೆ ಹಲವಾರು ಹೊಸ ದೂರಗಾಮೀ ಬಸ್‌ಗಳನ್ನು ಪ್ರವೇಶಗೊಳಿಸಲಾಗಿದೆ. ಮಂಗ ಳೂರಿನಿಂದ ಹಾಗೂ ಹುಬ್ಬಳ್ಳಿಯಿಂದ ತಿರುಪತಿಗೆ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ಬಸ್‌ಗಳೂ, ತಿರುಪತಿಯಿಂದ ಮೈಸೂರು ಹಾಗೂ ಹೊಸಪೇಟೆ ಗಳಿಗೆ ಆಂಧ್ರ ಪ್ರದೇಶ ರಸ್ತೆಸಾರಿಗೆ ಸಂಸ್ಥೆಯ ಬಸ್‌ಗಳೂ ಈಗ ನಡೆಯುತ್ತಿವೆ. ಮಂಗಳೂರನ್ನು ರಾತ್ರಿ 8 ಗಂಟೆಗೆ ಬಿಡುವ ಬಸ್ ಬೆಳಗ್ಗೆ 11 ಕ್ಕೆ ತಿರುಪತಿ ಸೇರುತ್ತದೆ. ಇದೇರೀತಿ ರಾತ್ರಿ 8ಗಂಟೆಗೆ ತಿರುಪತಿಯನ್ನು ಬಿಡುವ ಬಸ್ ಬೆಳಗ್ಗೆ 11 ಕ್ಕೆ ಮಂಗಳೂರು ಸೇರುತ್ತದೆ. ಹುಬ್ಬಳ್ಳಿಯ ಬಸ್ ತಿರು ಪತಿಯನ್ನು ಸಂಜೆ 6 ಗಂಟೆಗೆ ಬಿಟ್ಟು ಪೀಲೇರು, ಚಿಂತಾಮಣಿ, ಶಿರಾ, ಗಳ ಮೂಲಕ ಹಾದು ಹುಬ್ಬಳ್ಳಿಯನ್ನು ಸೇರುತ್ತದೆ. ಮೈಸೂರಿಗೆ ಹೊರ ಡುವ ಆಂಧ್ರದ ಬಸ್ ದಿನವೂ ರಾತ್ರಿ 8 ಗಂಟೆಗೆ ತಿರುಪತಿಯನ್ನು ಬಿಟ್ಟು ಕೋಲಾರ ಬೆಂಗಳೂರು, ಚೆನ್ನಪಟ್ಟಣ ಮಾರ್ಗವಾಗಿ ಮೈಸೂರು ಸೇರು ವುದು. (ಕರ್ನಾಟಕದ ಬಸ್ ದಿನವೂ ರಾತ್ರಿ 10 ಗಂಟೆಗೆ ತಿರುಪತಿಯಿಂದ ಮೈಸೂರಿಗೆ ಹೊರಡು ವುದು) ಹೊಸಪೇಟೆಯ ಬಸ್ಸು ಪ್ರತಿದಿನ ಸಂಜೆ 5 ಗಂಟೆಗೆ ತಿರುಪತಿಯನ್ನು ಬಿಟ್ಟು ಅನಂತಪುರ, ಬಳ್ಳಾರಿಗಳ ಮೂಲಕ ಬೆಳಗ್ಗೆ 4 ಗಂಟೆಗೆ ಹೊಸ ಪೇಟೆ ಸೇರುವುದು.

## ಸಂಗೀತೋತ್ಸವದಲ್ಲಿ ಪ್ರಕಟವಾದ ಪುಸ್ತಕಗಳು

ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀ ತೋತ್ಸವದಲ್ಲಿ ತಿ. ತಿ. ದೇ. ಗಳ ಧಾರ್ಮಿಕ ಗ್ರಂಥಗಳನ್ನು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಬಿಡುಗಡೆ ಮಾಡಿದರು. ವೇದಗಳು, ಗೀತಾತಾತ್ಪರ್ಯ, ಆರ್ಷ ವಿದ್ಯೆ, ಸಣ್ಣಕಥೆಗಳು ಮೊದಲಾಗಿ ಹಲವು ವಿಧದ ವಸ್ತು ವಿಷಯಗಳನ್ನೊಳಗೊಂಡ ಪಟ್ಟಿಯನ್ನಿಲ್ಲಿ ನೀಡಲಾಗಿದೆ.

1. ಋಗ್ವೇದ–ಸಂ 4
   ಡಾ॥ ವಡ್ಲಮೂಡಿ ಗೋಪಾಲಕೃಷ್ಣಯ್ಯ
   ಆಂಧ್ರಾನುವಾದಕರು:–ನೇಮಾನಿ ವೆಂಕಟ ನರಸಿಂಹ ಶಾಸ್ತ್ರಿ.
2. ಶ್ರೀಮದ್ಭಗವದ್ಗೀತಾ ರಹಸ್ಯಮು ಸಂ–2
   ಮೂಲ–ಲೋಕಮಾನ್ಯ ಬಾಲಗಂಗಾಧರ ತಿಲಕ್
   ಆಂಧ್ರಾನುವಾದ–ನೋರಿ ಸುಬ್ರಹ್ಮಣ್ಯ ಶಾಸ್ತ್ರಿ
3. ಆರ್ಷವಿಜ್ಞಾನ ಸರ್ವಸ್ವಮು ಸಂ–2
   ಬ್ರಾಹ್ಮಣಗಳು
   ಸಂ. – ಡಾ॥ ಎಸ್. ಬಿ. ರಘು ನಾಥಾಚಾರ್ಯ
4. ಕಥಾಸರಿತ್ಸಾಗರಮು ಸಂ–11, 12.
   ಮೂಲ–ಸೋಮದೇವ
   ಆಂಧ್ರಾನುವಾದ–ವಿದ್ವಾನ್ ವಿಶ್ವಂ
5. ರಸಗುಳಿಕಲು–ಮಣಿಪೂಸಲು
   18 ನೀತಿ ಕಥೆಗಳು
   – ಚರ್ಲ ಸತ್ಯನಾರಾಯಣ.
6. ಆಧ್ಯಾತ್ಮ ಸಂಕೀರ್ತನಲು ಸಂ–3
   ಅನ್ನಮಾಚಾರ್ಯರ ಸಂಕೀರ್ತನೆಗಳು–
   ಸಂ–ಗೌರಿಪೆದ್ದಿ ರಾಮಸುಬ್ಬಶರ್ಮ.
7. ದುರ್ಗಾಸಪ್ತಶತಿ
   ಆಂಧ್ರಾನುವಾದ–ಡಾ॥ ಪಿ ಎಸ್. ಶಾಸ್ತ್ರಿ
8. ಅನ್ನಮಯ್ಯ ಅಂತರಂಗ ಮುಲೊ ಅಲಮೇಲುಮಂಗ
   ಅನ್ನಮಾಚಾರ್ಯರ ಅಲಮೇಲು ಮಂಗಾ ಸಂಕೀರ್ತನೆಗಳ ಅಧ್ಯಯನ
   – ಡಾ॥ ಕೆ. ವಾಣಿ
9. ಎಟರ್ನಲ್ ರಿಲವೆನ್ಸ್ ಆಫ್ ವೇದಾಸ್
   –ಅಗ್ನಿಹೋತ್ರಂ ರಾಮಾನುಜ ತಾತಾಚಾರ್ಯ
10. ಆಂಡಾಳ್
    ಮಕ್ಕಳಿಗಾಗಿ ಕಿರುಹೊತ್ತಿಗೆ
    - ಕೆ. ಟಿ. ಎಲ್. ನರಸಿಂಹಾಚಾರ್ಯುಲು.
11. ಭೀಮಸೇನುಡು
    ಮಕ್ಕಳಿಗಾಗಿ ಕಿರುಹೊತ್ತಿಗೆ
    – ಬಿ. ವಿ ನರಸಿಂಹರಾವ್.

---

ಮುಂದಿನ ಸಂಚಿಕೆಯಲ್ಲಿ .... .... ....

ಸಪ್ತಗಿರಿ. —ಆಗಸ್ಟ್ 1986

**ಶ್ರೀಕೃಷ್ಣಲೀಲಾತರಂಗಿಣಿ**
– ವಿದ್ವಾನ್ ಬ. ನ. ಗುಂಡೂರಾವ್

**ಹರಿದಾಸರು ಕಂಡ ಲಕ್ಷ್ಮೀದೇವಿ**
– ಸುಮನ ಬದರೀನಾಥ್

**ಧನುರ್ದಾಸ**
– ಲ. ನಾ. ಶಾಸ್ತ್ರಿ.

**ಪ್ರಸನ್ನ ವೆಂಕಟದಾಸರು**
– ಆರ್. ರಾಮಕೃಷ್ಣ.

**ಶ್ರೀಕೃಷ್ಣಚೈತನ್ಯರು**
– ಗುರುನಾಥ ಇನಾಮದಾರ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ, ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಆಗಸ್ಟ್ 1986

| | | |
|---|---|---|
| 5. | ಮಂಗಳವಾರ | ಚಕ್ರತ್ತಾಳ್ವಾರ್ ವರ್ಷ ತಿರುನಕ್ಷತ್ರ. |
| 9. | ಶನಿವಾರ | ನಾಗಚತುರ್ಥಿ. |
| 10. | ಭಾನುವಾರ | ಗರುಡಪಂಚಮಿ. |
| 11. | ಸೋಮವಾರ | ಕಲ್ಕಿಜಯಂತಿ. |
| 14. | ಗುರುವಾರ | ತಿರುಮಲೆಯಲ್ಲಿ ಪವಿತ್ರೋತ್ಸವ ಅಂಕುರಾರ್ಪಣೆ. |
| 15. | ಶುಕ್ರವಾರ | ಸ್ವಾತಂತ್ರ್ಯ ದಿನ, ವರಲಕ್ಷ್ಮೀವ್ರತ. |
| 17. | ಭಾನುವಾರ | ತಿರುಮಲೆಯಲ್ಲಿ ಪವಿತ್ರೋತ್ಸವ ಸಮಾಪ್ತಿ. |
| 19. | ಮಂಗಳವಾರ | ಋಕ್, ಯಜುರ್, ವಾಜಸನೇಯ ಉಪಾಕರ್ಮ. |
| 20. | ಬುಧವಾರ | ಗಾಯತ್ರೀಜಪ. |
| 27. | ಬುಧವಾರ | ಗೋಕುಲಾಷ್ಟಮಿ. |
| 28. | ಗುರುವಾರ | ತಿರುಮಲೆಯಲ್ಲಿ ಉಟ್ಲ ಉತ್ಸವ |

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | ಪ್ರಾ 7-30 | ಪ್ರಾ 8-00 |
| ಅರ್ಚನ (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | ಪ್ರಾ 8-00 | ಪ್ರಾ 8-30 |
| ಸರ್ವದರ್ಶನ | ಪ್ರಾ 9-00 | ಮ 12-30 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | ,, | 40-00 |
| 3. | ಪುಳಿಯೋಗರೆ | ,, | 50-00 |
| 4. | ಪೊಂಗಲು | ,, | 55-00 |
| 5. | ಸಕ್ಕರಪೊಂಗಲ್ | ,, | 55-00 |
| 6. | ಶಾಕರ ಭಾತ್ | ,, | 85-00 |
| 7. | ಕೇಸರೀ ಭಾತ್ | | [illegible]0-00 |
| 8. | ಸೀರ | | 155-00 |

ವಿವರಗಳಿಗೆ:

**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

